# ಮ್ಯಾಸಬೇಡ ಸಮುದಾಯ ಹಾಗೂ ಜಗಳೂರು ಪಾಪನಾಯಕ

(ಒಂದು ಸಾಂಸ್ಕೃತಿಕ ಅಧ್ಯಯನ)

ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧ

ಸಂಶೋಧಕರು
ಉಮೇಶ ಎಂ. ಬಿ.

ಮಾರ್ಗದರ್ಶಕರು
ಡಾ. ಗಂಗಾಧರ ದೈವಜ್ಞ
ಹಿರಿಯ ಶ್ರೇಣಿಯ ಅಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭ - ೦೮

289

# ಮ್ಯಾಸಬೇಡರ ಸಮುದಾಯ ಹಾಗೂ ಜಗಳೂರು ಪಾಪನಾಯಕ

(ಒಂದು ಸಾಂಸ್ಕೃತಿಕ ಅಧ್ಯಯನ)

( ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕರು

ಉಮೇಶ ಎಂ.ಓ.

ಮಾರ್ಗದರ್ಶಕರು

ಡಾ. ಗಂಗಾಧರ ದೈವಜ್ಞ

ಹಿ.ಶ್ರೇ. ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬











ಸಮಾಜ ವಿಜ್ಞಾನ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಹಿರಿಯ ಶ್ರೇಣಿಯ ಅಧ್ಯಾಪಕರಾದ ಡಾ. ಗಂಗಾಧರ ದೈವಜ್ಞ ಅವರ ಮಾರ್ಗದರ್ಶನದಲ್ಲಿ **"ಮ್ಯಾಸಬೇಡರ ಸಮುದಾಯ ಹಾಗು ಜಗಳೂರು ಪಾಪನಾಯಕ"** (ಒಂದು ಸಾಂಸ್ಕೃತಿಕ ಅಧ್ಯಯನ) ಎಂಬ ವಿಷಯ ಕುರಿತು ಸಂಶೋಧನೆ ಮಾಡಿದುದರ ಫಲವಾಗಿ ಈ ಸಂಪ್ರಬಂಧವನ್ನು ೨೦೦೭-೦೮ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಲಾಗಿದೆ. ಈ ಮೊದಲು ಸಂಪ್ರಬಂಧವನ್ನು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Umesh M O.

(ಉಮೇಶ ಎಂ.ಓ.)
ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ:
ಸ್ಥಳ: ವಿದ್ಯಾರಣ್ಯ

# ದೃಢೀಕರಣ ಪತ್ರ

**"ಮ್ಯಾಸಬೇಡರ ಸಮುದಾಯ ಹಾಗು ಜಗಳೂರು ಪಾಪನಾಯಕ"** (ಒಂದು ಸಾಂಸ್ಕೃತಿಕ ಅಧ್ಯಯನ) ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಉಮೇಶ ಎಂ.ಓ. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ

**(ಡಾ. ಗಂಗಾಧರ ದೈವಜ್ಞ)**
ಹಿ.ಶ್ರೇಣಿ ಅಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ


ಜಗಳೂರು


ಬಳ್ಳಾರಿ
ಹರಪನಹಳ್ಳಿ
ಜಗಳೂರು
ಹಾವೇರಿ
ಹರಿಹರ
ದಾವಣಗೆರೆ
ಹೊನ್ನಾಳಿ
ಚನ್ನಗಿರಿ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಮಗಳೂರು

ದಾವಣಗೆರೆ ಜಿಲ್ಲೆ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ**

ಪ್ರತಿಯೊಂದು ಸಮುದಾಯವು ತನ್ನದೆ ಆದ ಜೀವನ ವಿಧಾನವನ್ನು ಹೊಂದಿರುತ್ತದೆ. ಆ ಜೀವನ ವಿಧಾನಕ್ಕನುಗುಣವಾಗಿ ಸಂಸ್ಕೃತಿಯು ರೂಪಗೊಂಡಿರುತ್ತದೆ. ಬುಡಕಟ್ಟು ಸಮುದಾಯಗಳು ಸಹ ತನ್ನದೆ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುತ್ತವೆ. ಈ ಸಂಸ್ಕೃತಿಯನ್ನು ವಂಶಪಾರಂಪ ರಾಗತವಾಗಿ ಉಳಿಸಿಕೊಂಡು ಕಾಲಕ್ಕೆ ತಕ್ಕಂತೆ ಬೆಳೆಸಿಕೊಂಡು ಬಂದಿರುತ್ತವೆ.ಈ ಬುಡಕಟ್ಟು ಸಮುದಾಯಗಳು ಶತಮಾನಗಳಿಂದಲೂ ಬೆಟ್ಟ, ಗುಡ್ಡ, ಮರಳುಗಾಡು ನಗರ ಮತ್ತು ಗ್ರಾಮೀಣ ಸಂಸ್ಕೃತಿಗಳ ಪ್ರಭಾವಕ್ಕೆ ಸಿಕ್ಕದೆ ತಮ್ಮ ಸಂಸ್ಕೃತಿಯನ್ನು ಪ್ರತ್ಯೇಕವಾಗಿ ಉಳಿಸಿಕೊಂಡು ಬರುವುದುಂಟು, ಇತರೆ ಸಮುದಾಯಗಳಿಗಿಂತ ಭಿನ್ನವಾದ ಹಾಗೂ ಪ್ರತ್ಯೇಕವಾದ ಜೀವನಕ್ರಮವನ್ನು ರೂಢಿಸಿಕೊಂಡು ತಮ್ಮದೇ ಆದ ಸಾಂಸ್ಕೃತಿಕ ಮೌಲ್ಯಗಳನ್ನು ಇಂದಿನವರೆಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವ ಒಂದು ಗುಂಪಿನ ಅಥವಾ ಸಮುದಾಯದ ಜನರನ್ನು ಬುಡಕಟ್ಟುಗಳೆಂದು ಸಾಮಾನ್ಯವಾಗಿ ಗುರುತಿಸಲಾಗುತ್ತದೆ.

## ಅಧ್ಯಯನದ ಉದ್ದೇಶ

ಕರ್ನಾಟಕದ ಐವತ್ತು ಬುಡಕಟ್ಟುಗಳಲ್ಲಿ ಬೇಡ ಸಮುದಾಯವು ಒಂದು ಭಾರತ ಸರ್ಕಾರ ಪರಿಗಣಿಸಿರುವ ಬುಡಕಟ್ಟುಗಳಲ್ಲಿಯೇ ಹೆಚ್ಚು ಜನಸಂಖ್ಯೆಯನ್ನು ಹೊಂದಿದ ಈ ಬುಡಕಟ್ಟು ಸಮುದಾಯವು ತನ್ನ ಪೂರ್ವಿಕರ ಆಚಾರ ವಿಚಾರ, ಸಂಪ್ರದಾಯಗಳ ಮೇಲೆ ಅಪಾರ ನಂಬಿಕೆ. ಇತರೆ ಬುಡಕಟ್ಟುಗಳಿಗಿಂತ ವಿಭಿನ್ನ ಆಚರಣೆಗಳನ್ನು ಈ ಸಮುದಾಯ ಹೊಂದಿದೆ. ಆಧುನಿಕತೆಗೆ ಮುಖಾ ಮುಖಿಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಈ ಸಮುದಾಯಲ್ಲಿನ ಅನೇಕ ಪರಂಪರಾಗತವಾಗಿ ಸಾಗಿ ಬಂದ ಆಚರಣೆಗಳು ಮಾಯವಾಗುತ್ತಿವೆ. ಕೆಲವು ಆಚರಣೆಗಳು ಹೊಸ ರೂಪವನ್ನು ಪಡೆದುಕೊಂಡಿವೆ. ಮೌಖಿಕ ಸಂಪ್ರದಾಯದಲ್ಲೇ ನೂರಾರು ವರ್ಷಗಳಿಂದ ಸಾಮೂಹಿಕವಾಗಿ ಆಚರಿಸಿಕೊಂಡು ಬರುತ್ತಿದ್ದ ಆಚರಣೆಗಳು ಇಂದು ಸಮುದಾಯದಲ್ಲಿ ಅವರ ನಾಯಕತ್ವದ ಕೊರತೆಯುಂಟಾಗಿ ಅನೇಕ ಆಚರಣೆಗಳು ಮಾಯವಾಗುತ್ತಿವೆ. ನಶಿಸಿ ಹೋಗುತ್ತಿರುವ

ಅವರ ಅನೇಕ ಆಚರಣೆಗಳನ್ನು ಅಧ್ಯಯನ ಮತ್ತು ಸಂಶೋಧನೆ ಮಾಡುವುದು ಆ ಸಂದರ್ಭದಲ್ಲಿ ಅತಿ ಮುಖ್ಯವಾಗಿದೆ. ಈ ಬುಡಕಟ್ಟುಗಳ ಆರಾಧಕರಲ್ಲಿ ಒಬ್ಬರಾದ ಜಗಳೂರು ಪಾಪನಾಯಕನನ್ನು ಕುರಿತು ಅಧ್ಯಯನ ಹಾಗೂ ಸಂಶೋಧನೆ ಮಾಡುವುದು ಮುಖ್ಯವಾಗಿದೆ. ಮ್ಯಾಸ ಬೇಡರ ಬಗ್ಗೆ ಅನೇಕ ಸಂಶೋಧನೆಗಳು ನಡೆದಿವೆ. ಈ ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಾದ ಜಗಳೂರು ಪಾಪನಾಯಕನ ಬಗ್ಗೆ ಹೆಚ್ಚಿನ ಸಂಶೋಧನೆಗಳು ನಡೆದಿಲ್ಲ ಈ ವಿಶಿಷ್ಟ ಪುರುಷನನ್ನು ಮ್ಯಾಸಬೇಡರು ಸಾಂಸ್ಕೃತಿಕ ನಾಯಕನೆಂದು ಗುರುತಿಸಿಕೊಂಡಿದ್ದಾರೆ. ಈತನನ್ನು ಕುರಿತು ವಿಸ್ತೃತವಾದ ವಿವರಗಳನ್ನು ಕೊಟ್ಟು ವಿಶ್ಲೇಷಣೆ ಮಾಡುವುದು ನನ್ನ ಅಧ್ಯಯನದ ಗುರಿಯಾಗಿದೆ. ಜೊತೆಗೆ ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರಗಳು ಮತ್ತು ದೈವಗಳನ್ನು ಕುರಿತು ಇಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

ಮ್ಯಾಸನಾಯಕರ ಆರಾಧಿಸುತ್ತಿರುವ ಸಾಂಸ್ಕೃತಿಕ ನಾಯಕರ ಅನೇಕ ಪಾರಂಪರಾನು ಗತವಾದ ಆಚರಣೆಗಳನ್ನು ವಿಶ್ಲೇಷಿಸಲಾಗಿದೆ. ಈ ಸಾಂಸ್ಕೃತಿಕನಾಯಕರು ಕ್ರಮೇಣ ಆಧುನಿಕ ಆಚರಣೆಗಳ ಮೂಲಕ ಹೇಗೆ ಸ್ಥಿತ್ಯಂತರಗೊಂಡಿದ್ದಾರೆಂಬುದನ್ನು ವಿಶ್ಲೇಷಿಸಲಾಗಿದೆ. ನಾಯಕ ಸಮುದಾಯದವರು ಅಂಶಗಳನ್ನು ಆರಾಧಿಸಲ್ಪಡುವ ಅಲಕ್ಷಕೊಳಪಟ್ಟಿರುವ ನಾಯಕನರ ಮತ್ತು ಅವರ ಅವನತಿಗೆ ಕಾರಣವಾದ ಅಂಶಗಳನ್ನು ವಿಶ್ಲೇಷಿಸುವುದು ನನ್ನ ಈ ಅಧ್ಯಯನದಲ್ಲಿ ರೂಪಿಸಲಾಗಿದೆ. ಸಾಂಸ್ಕೃತಿಕ ನಾಯಕನಾದ ಜಗಳೂರು ಪಾಪನಾಯಕ ಇಂದು ಕೇವಲ ನಾಯಕ ಸಮುದಾಯಕ್ಕಷ್ಟೇ ಅಲ್ಲ ಗೊಲ್ಲರು, ಲಿಂಗಾಯತರು, ಆದಿದ್ರಾವಿಡರು, ಮುಸ್ಲಿಮರು, ಕುರುಬರು, ಹೀಗೆ ಅನೇಕ ಸಮುದಾಯಗಳು ಜಗಳೂರು ಪಾಪನಾಯಕನನ್ನು ಆರಾಧಿಸುವುದು ಕಂಡು ಬರುತ್ತದೆ. ಜಗಳೂರು ಪಾಪನಾಯಕನಿಗೆ ಸೋಮವಾರ ದಿನದಂದು ವಿಶೇಷ ಪೂಜೆ ನಡೆಯುತ್ತದೆ. ಜಗಳೂರು ಪಾಪನಾಯಕನನ್ನು ಕೃಷಿ ಸಮುದಾಯದವರೆಲ್ಲರೂ ಆರಾಧಿಸುತ್ತಾರೆ. ಹೀಗಾಗಿ ಕೃಷಿ ಸಮುದಾಯ ಮತ್ತು ಜಗಳೂರಜ್ಜನಿಗೆ ಇರುವ ಸಂಬಂಧವನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

ಜಗಳೂರು ಪಾಪನಾಯಕ ಮ್ಯಾಸಬೇಡರ ಆರಾಧ್ಯ ದೈವ, ರೈತ ತನ್ನ ಸುತ್ತಮುತ್ತಲಿನ ಪರಿಸರ, ಜನಜೀವನ, ಆಚಾರ ವಿಚಾರ ನಂಬಿಕೆ ಮತ್ತು ಸಂಪ್ರದಾಯ ಹಾಗೂ ಇತರ ದೈವಗಳ ಪರಂಪರೆಗಳನ್ನು ಇವನು ಪ್ರತಿನಿಧಿಸುತ್ತಾನೆ. ಜಗಳೂರಜ್ಜನನ್ನು ಅಧ್ಯಯನಕ್ಕೊಳಪಡಿಸುವುದರಿಂದ ಈ ದೈವಕ್ಕೂ ಮ್ಯಾಸಬೇಡರಿಗೂ ಹಾಗೂ ಇತರೆ ಸಮುದಾಯಗಳಿಗೂ ಇರುವ ಧಾರ್ಮಿಕವಾದ ಅವಿನಾಭಾವ ಸಂಬಂಧ ಎಂತಹದ್ದು ಎಂಬುದನ್ನು ಕುರಿತು ಅಧ್ಯಯನ ಮಾಡುವುದು ಇದರ ಮೂಲ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಸಾಂಸ್ಕೃತಿಕ ನಾಯಕನಾದ ಜಗಳೂರು ಪಾಪನಯಕ ಅವನ ಆಚರಣೆ ಹಾಗೂ ಆರಾಧನಾ ಕ್ಷೇತ್ರಗಳಿಗೆ ಮಾತ್ರ ಸೀಮಿತವಾಗಿದೆ. ಮ್ಯಾಸಬೇಡರಲ್ಲಿ ಅನೇಕ ದೈವಗಳು

ಕಂಡು ಬರುತ್ತವೆ. ಬೋಸೆರಂಗ, ದಡ್ಡಿಸೂರನಾಯಕ, ಗಾದ್ರಿಪಾಲನಾಯಕ, ಬೋರೆದೇವರು, ಶ್ರೀರಂಗಪಳರಂಗಸ್ವಾಮಿ, ಓಬಳ ನರಸಿಂಹಸ್ವಾಮಿ, ಬೊಮ್ಮಲಿಂಗೇಶ್ವರ, ಗೌರಸಂದ್ರಮಾರಮ್ಮ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಇವು ಮ್ಯಾಸಬೇಡರ ಪ್ರಮುಖ ಆರಾಧನಾ ದೈವಗಳಾಗಿವೆ. ಅಧ್ಯಯನದ ವ್ಯಾಪ್ತಿಗೆ ಜಗಳೂರು ಪಾಪನಾಯಕನಾದ ಜಗಳೂರಜ್ಜ ತಿರುಪತಿ ತಿಮ್ಮಪ್ಪನ ದರ್ಶನ ಪಡೆಯುವುದು ಹಾಗೂ ಸಿಡಿಲು ಮಿಂಚಿನ ಕಟಾರಿ, ಸೂರ್ಯನಂದನ ಕಟಾರಿ, ಪವಾಡಗಳನ್ನೂ ಸಹ ಈ ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಳ್ಳಲಾಗಿದೆ. ಜಗಳೂರಜ್ಜನ ನೆಲೆಗಳಾದ ಚಿತ್ರದುರ್ಗ ಜಿಲ್ಲೆ ಜಗಳೂರು ತಾಲೂಕು ಜಗಳೂರಜ್ಜ ಹಾಗೂ ಮೊಳಕಾಲ್ಮೂರು ತಾಲೂಕಿನ (ಚಿಕ್ಕುಂತಿ) ಕಂಪಳ ದೇವರಹಟ್ಟಿ ಜಗಳೂರಜ್ಜನ ಆರಾಧನ ಕ್ಷೇತ್ರಗಳು. ಈ ಎಲ್ಲಾ ಕ್ಷೇತ್ರಗಳನ್ನು ನನ್ನ ಅಧ್ಯಯನಕ್ಕಾಗಿ ಬಳಸಿಕೊಳ್ಳಲಾಗುವುದು.

### ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಬುಡಕಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ಸಂಶೋಧನೆಗಳು ವಿಫುಲವಾಗಿ ನಡೆದಿವೆ. ಅದರಲ್ಲಿಯೂ ಬೇಡ ಬುಡಕಟ್ಟುಗಳ ಬಗ್ಗೆ ಸಾಕಷ್ಟು ಸಂಶೋಧನೆಗಳು ನಡೆಯುತ್ತಾ ಬಂದಿವೆ. ಅದರಲ್ಲಿಯೂ ಮುಖ್ಯವಾಗಿ ಕೆಲವು ಅಧ್ಯಯನಗಳನ್ನು ವಿವರಿಸಲಾಗಿದೆ. ಡಾ. ಕೃಷ್ಣಮೂರ್ತಿ ಹನೂರರ 'ಮ್ಯಾಸ ಬೇಡರ ಸಂಸ್ಕೃತಿ' ಈ ಕೃತಿ ಬೇಡಬುಡಕಟ್ಟು ಸಮುದಾಯದ ಜೀವನ ಆಚಾರ-ವಿಚಾರಗಳನ್ನು ಕುರಿತು ವಿವರಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿಯವರ ಚಿತ್ರದುರ್ಗ ಜಿಲ್ಲೆ ಬುಡಕಟ್ಟು ವೀರರು ಈ ಕೃತಿಯಲ್ಲಿ ಪ್ರಮುಖವಾಗಿ ಈ ಸಮುದಾಯದ ಸಾಂಸ್ಕೃತಿಕ ನಾಯಕರ ಚಿತ್ರಣವನ್ನು ನೀಡಿದ್ದಾರೆ. 'ಗಾದ್ರಿಪಾಲನಾಯಕ' ಇದು ಅವರದೇ ಕೃತಿಯಾಗಿದೆ. ಕರಿಶೆಟ್ಟಿ ರುದ್ರಪ್ಪನವರ 'ಮ್ಯಾಸಬೇಡರು' ಒಂದು ಜನಾಂಗೀಯ ಅಧ್ಯಯನ ಈ ಸಂಶೋಧನಾ ಕೃತಿ ಬಹಳ ಮೌಲ್ಯಯುತವಾದಂತಹ ಕೃತಿಯಾಗಿದೆ. ಎ.ಎಸ್.ಪ್ರಭಾಕರರವರು 'ಮ್ಯಾಸಬೇಡರ ಕಥನಗಳು' ಈ ಕೃತಿಯಲ್ಲಿ ಜಗಳೂರಜ್ಜನ ಗಾದ್ರಿಪಾಲನಾಯನ ಕಾವ್ಯ, ಶ್ರೀಕಂಪಳರಂಗಸ್ವಾಮಿ ಹಾಗೂ ಬೋರೆ ದೇವರ ಕಾವ್ಯವನ್ನು ಸಂಪಾದಿಸಿದ್ದಾರೆ. ಗಂಗಾಧರ ದೈವಜ್ಞರವರು ಬುಡಕಟ್ಟು ಸಮಾಜ ಹುಟ್ಟು ಮತ್ತು ಸಾವಿನ ನಡುವೆ ಈ ಕೃತಿಯಲ್ಲಿ ಮ್ಯಾಸ ಬೇಡರು ಹುಟ್ಟಿನ ಸಂದರ್ಭದಿಂದ ಸಾವಿನವರೆಗಿನ ಆಚರಣೆಗಳನ್ನು ಕುರಿತು ವಿಶಿಷ್ಟವಾದ ಮಾಹಿತಿ ದೊರೆಯುತ್ತದೆ. ಅಧ್ಯಯನಕಾರರು ಪ್ರಮುಖವಾಗಿ ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ವಾಸವಾಗಿರುವ ಮ್ಯಾಸಬೇಡರನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಆದರೆ ಯಾರೂ ಸಹ ಜಗಳೂರಜ್ಜನ ಆಚರಣೆ, ಸಂಪ್ರದಾಯ, ಆಚಾರ-ವಿಚಾರ, ಪವಾಡ, ಐತಿಹ್ಯ ಕಥೆಗಳನ್ನು ಕುರಿತು ಅಧ್ಯಯನ ಕೈಕೊಂಡಿಲ್ಲ.

### ಅಧ್ಯಯನದ ವಿಧಾನ

ಸಂಶೋಧನೆಗೆ ಆಯ್ದುಕೊಂಡ ಕ್ಷೇತ್ರದಲ್ಲಿ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಲು

## ಅಧ್ಯಾಯ ಎರಡು

# ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರಗಳು ಮತ್ತು ದೈವಗಳು

ಮೂರು ಆರಾಧನಾ ಕ್ಷೇತ್ರಗಳು ಮತ್ತು ಆ ಪರಿಸರದ ಸಮುದಾಯದ ಎಲ್ಲ ಹಿರಿಯರಿಂದ ಹಾಗೂ ಅನುಭವಸ್ಥರಿಂದ ವಿವರಗಳನ್ನು ಪಡೆಯಲಾಗಿದೆ. ಜಗಳೂರು ಪಾಪನಾಯಕನ ಬಗ್ಗೆ ಧಾರ್ಮಿಕ ನಂಬಿಕೆಗಳು ಮತ್ತು ವಿಧಿ ನಿಷೇದಗಳಲ್ಲಿ ಮ್ಯಾಸಬೇಡ ಸಮುದಾಯದ ಅಸ್ತಿತ್ವವನ್ನು ಸಮುದಾಯಿಕ ಮನೋಭಾವನೆಯಲ್ಲಿ ನಿಂತು ಮಾಹಿತಿಯನ್ನು ಸಂಗ್ರಹಿಸುವುದು, ಸಹಭಾಗಿತ್ವದ ಹಿನ್ನೆಲೆಯಲ್ಲಿ ಅರ್ಥೈಸುವುದು, ವರ್ತಮಾನದಲ್ಲಿ ಮ್ಯಾಸ ಬೇಡ ಬುಡಕಟ್ಟು ಹಾಗೂ ಜಗಳೂರು ಪಾಪನಾಯಕನ ಅಸ್ತಿತ್ವವನ್ನು ಹಾಗೂ ಅಭಿವೃದ್ಧಿಯನ್ನು ಚರ್ಚಿಸುವುದಾಗಿದೆ.

ಸಂದರ್ಶನ ವಿಧಾನ

ಅವಲೋಕನ ವಿಧಾನ

ಸಹಭಾಗಿತ್ವ ವಿಧಾನ

ಐತಿಹಾಸಿಕ ವಿಧಾನ

ತೌಲನಿಕ ವಿಧಾನ

ಪ್ರಶ್ನಾವಳಿ ಮತ್ತು ಸಂದರ್ಶನ ವಿಧಾನ

ವಿಷಯ ಅಧ್ಯಯನ

ಈ ಅಧ್ಯಯನಕ್ಕಾಗಿ ಮೇಲೆ ಸೂಚಿಸಿರುವ ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ.

# ಅಧ್ಯಾಯ ಎರಡು

# ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರಗಳು ಮತ್ತು ದೈವಗಳು

## ಮ್ಯಾಸಬೇಡರ ಧಾರ್ಮಿಕ ಕೇಂದ್ರಗಳು

ಚಿತ್ರದುರ್ಗ ಜಿಲ್ಲೆ ಮ್ಯಾಸಬೇಡರ ಸಮುದಾಯದವರು ಪಕೃತಿ ಆರಾಧಕರು ಇವರು ಆರಾಧಿಸುವ ನೂರಾರು ಧಾರ್ಮಿಕ ಕೇಂದ್ರಗಳನ್ನು ಈ ಜಿಲ್ಲೆಯಲ್ಲಿ ಗುರುತಿಸಬಹುದು. ಈ ಬುಡಕಟ್ಟು ವ್ಯಕ್ತಿಯ ಹೆಸರು, ಬೆಡಗು, ಮನೆದೇವರು, ಮೂಲನೆಲೆ, ವಸತಿ, ಸಂಪ್ರದಾಯ ಮತ್ತು ನಂಬಿಕೆ ಮೊದಲಾದ ಅಂಶಗಳನ್ನು ಆಧಾರವಾಗಿಟ್ಟು ಕೊಂಡು ಇವರ ಧಾರ್ಮಿಕ ಕೇಂದ್ರಗಳನ್ನು ನಿರ್ಧರಿಸಬಹುದಾಗಿದೆ. ಮೂಡಲಗಿರಿಯ ತಿರುಪತಿ, ಶ್ರೀಶೈಲದ ಮಲ್ಲಿಕಾರ್ಜುನ ಹಾಗೂ ಹೋಬಲ ನರಸಿಂಹಸ್ವಾಮಿ ಈ ಸಮುದಾಯದ ಪ್ರಧಾನ ದೈವಗಳು ಮತ್ತು ಧಾರ್ಮಿಕ ಕೇಂದ್ರಗಳು. ಕಾಲಕ್ರಮೇಣ ಈ ಸಮುದಾಯಗಳು ಕಟ್ಟೆಮನೆ ಮತ್ತು ಗುರುಸ್ಥಾನಗಳು ಕಾಲಾನಂತರ ಧಾರ್ಮಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಲು ಪ್ರಾರಂಭಿಸಿದವು. ಪ್ರಾದೇಶಿಕವಾಗಿ ಕೆಲವು ಗುಡಿಕಟ್ಟೆಗಳು ಮತ್ತು ಕಟ್ಟೆಮನೆಗಳು ಐತಿಹಾಸಿಕ ಮಹತ್ವ ಪಡೆದುಕೊಂಡಿವೆ. ನೀರಿನ ಸೌಲಭ್ಯ ಹೊಂದಿದ ನದಿ ಬೆಟ್ಟ, ಅರಣ್ಯ, ಹೊಂಡ ಹಳ್ಳ-ಕೊಳ್ಳ, ಹಾಗೂ ಒಡ್ಡು, ಪ್ರದೇಶಗಳಲ್ಲಿ ಇವರ ಸಾಂಸ್ಕೃತಿಕ ಕೇಂದ್ರಗಳಿವೆ. ಪೂಜಾರಿ, ದಾಸಯ್ಯ ಮತ್ತು ಸಮುದಾಯದ ಸಾಂಸ್ಕೃತಿಕ ವೀರರ ಸಮಾಧಿಗಳು ಕೂಡ ಈ ಸಮುದಾಯದ ಧಾರ್ಮಿಕ ಕೇಂದ್ರಗಳಾಗಿವೆ. ಕರ್ನಾಟಕದ ವೇದಾವತಿ, ಚಿನ್ನಹಗರಿನದಿ, ದೆಹಲಿ, ಅಯೋಧ್ಯ, ದ್ವಾರಕ-ದೇವಗಿರಿ, ವೆಂಕಟಗಿರಿ, ಹಸ್ತಗಿರಿ, ಕಾಳಹಸ್ತಿ, ಮೊದಲಾದವು ಮೂಲತಃ ಮ್ಯಾಸಬೇಡರ ಧಾರ್ಮಿಕ ನೆಲೆಗಳಾಗಿದ್ದವು ಎಂದು ತಿಳಿಯುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡ ನಾಯಕರ ಧಾರ್ಮಿಕ ಕೇಂದ್ರಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಮ್ಯಾಸಬೇಡರ ಪ್ರಮುಖ ಧಾರ್ಮಿಕ ಕೇಂದ್ರಗಳೆಂದರೆ ತುಮಕೂರು ಜಿಲ್ಲೆಯ ಪಾವಗಡ ತಾಲೂಕಿನಲ್ಲಿರುವ ನಿಡಗಲ್ಲು ಬೆಟ್ಟದ ಬುಡದಲ್ಲಿರುವ ಪವಿತ್ರ ಹೊಂಡ ರಾಮತೀರ್ಥ, ಹೊಸದುರ್ಗ ತಾಲೂಕು ದೇವರಪುರದ ಹಾಲುರಾಮೇಶ್ವರ, ಹೊಳಲ್ಕೆರೆ ತಾಲೂಕು ದೇವರ ಗಂಜಿಗಟ್ಟೆ ಹತ್ತಿರ ಮಿಂಚೇರಿ ಅರಣ್ಯ ಮತ್ತು ವೇದಾವತಿ ನದಿ, ಹಿರಿಯೂರು ತಾಲೂಕು ಕೂಡಲ ಹಳ್ಳಿ ಹತ್ತಿರ ಕೂಡಲಸಂಗಮೇಶ್ವರ ಮತ್ತು ವೇದಾವತಿ ನದಿ ಹತ್ತಿರ ಕೋಟೆ ಓಬಳದೇವರು ಯರಬಳ್ಳಿ ಮಾರಕ್ಕ,

ಮಾರಿಕಣಿವೆಮಾರಕ್ಕ, ಮೊಳಕಾಲ್ಮೂರು ತಾಲೂಕು ಕಂಪಳದೇವರ ಹಟ್ಟಿ(ಚಿಕ್ಕುಂತಿ) ಕಂಪಳರಂಗಸ್ವಾಮಿ, ಕೂಡ್ಲಿಗಿ ತಾಲೂಕು ಮಾಕನಡಕದ ಕಂಚೋಬಳಿ ನರಸಿಂಹ ಸ್ವಾಮಿ, ಕುರಿಹಟ್ಟಿ ಬೊಮ್ಮದೇವರು, ಗೆದ್ದಲಗಟ್ಟೆ ಓಬಳ ದೇವರು, ಚಳ್ಳಕೆರೆ ತಾಲೂಕು ರುದ್ರಮ್ಮನ ಹಳ್ಳಿಯಲ್ಲಿ ಜರುಗುವ ಓಬಳ ದೇವರು ಚಳ್ಳಕೆರೆ ತಾಲೂಕು ರಾಮಸಾಗರದ ಗಾದ್ರಿಪಾಲನಾಯಕ, ಕಾಟಪ್ಪನಹಟ್ಟಿ ಕಾಟಮ್ಮಲಿಂಗೇಶ್ವರ, ಗೌರಸಮುದ್ರ ಬೊಮ್ಮಲಿಂಗೇಶ್ವರ, ಎನ್ ದೇವರಹಳ್ಳಿ ದಡ್ಡ ಮಾರಮ್ಮ, ಮಲ್ಲೂರಹಳ್ಳಿ ರಾಜದೇವರು, ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಚಿತ್ರಲಿಂಗೇಶ್ವರ, ಜಗಳೂರು ತಾಲೂಕು ಕಾಮಗೇತನಹಳ್ಳಿ ಸೂರಲಿಂಗೇಶ್ವರ, ಚಳ್ಳಕೆರೆ ತಾಲೂಕು ಬೋಸೆ ದೇವರಹಟ್ಟಿಯ ಬೋಸೆದೇವರು, ಸೂರನಹಳ್ಳಿ ಹತ್ತಿರ ಕಂಡು ಬರುವ ಗ್ರಾದಿ ಪಾಲನಾಯಕನ, ಹುಲಿಕಲ್ಲು ಗೋರ್ಲಕಟ್ಟೆಯ ಜಗಲೂರಜ್ಜನಗುಡಿ, ಬೆಳಗಟ್ಟದ ಸೂರ್ಯ ಯರಗಟ ನಾಯಕ ಮೊದಲಾದ ಧಾರ್ಮಿಕ ಕೇಂದ್ರಗಳನ್ನು ಇಲ್ಲಿ ಗುರುತಿಸಬಹುದು.

**ಮ್ಯಾಸಬೇಡರ ಮೂರು ಕಟ್ಟೆಮನೆಗಳು**

೧. ನಾಯಕನಹಟ್ಟಿ ಚಳ್ಳಕೆರೆ ತಾಲೂಕು ಚಿತ್ರದುರ್ಗ ಜಿಲ್ಲೆ – ಮೀಸೆನಾಯಕ

೨. ನನ್ನಿವಾಳ – ಗಟ್ಟಿಮುತ್ತನಾಯಕ

೩. ಗೋನಾರು – ಚಿತ್ರದುರ್ಗ ಜಿಲ್ಲೆ (ತಾಲೂಕು) ಬೋಸೆನಾಯಕ

**ಮ್ಯಾಸ ಬೇಡರ ನಾಲ್ಕು ಕಟ್ಟೆಗಳು**

೧. ರಾಯಚೂರು ಕಟ್ಟೆ

೨. ಶಿರಾಕಟ್ಟೆ

೩. ಚಾಪೂರಿ ಕಟ್ಟೆ

೪. ಅರೆ ಸಮುದ್ರಕಟ್ಟೆ

**ಮ್ಯಾಸ ಬೇಡರ ನಾಲ್ಕು ಕಟ್ಟೆಗಳು**

೧. ಹಿರೇಹಳ್ಳ ಕಟ್ಟೆ

೨. ಅಚ್ಚುವಳ್ಳಿಕಟ್ಟೆ

೩. ರಾಚಲ್ ಕಟ್ಟೆ

೪. ಜಾಜೂರು ಕಟ್ಟೆ

**ಮ್ಯಾಸ ಬೇಡರ ನಾಲ್ಕು ಗುಡಿಗಳು**

೧. ಹರ್ತಿಸಾರ ಗುಡಿ

೨. ರಾಜಬಂಡೆಗುಡಿ

೩. ಕಡೆವುಡಗಡಿ

೪. ಶಿವರಾ ಗಡಿ

**ಮ್ಯಾಸಬೇಡರ ಹೊರಗಿನ ಕಟ್ಟೆಮನೆಗಳು**

೧. ರತ್ನಗಿರಿ

೨. ಮಡಿಗೇಶಿ

೩. ಶಂಕರಗಲ್ಲು

**ಮ್ಯಾಸಬೇಡರ ೧೨ ಸಂಸ್ಥಾನಗಳು**

| | | | |
|---|---|---|---|
| ೧. ಆನೆಗುಂದಿ, | ೨. ನಿಡಗಲ್ಲು | ೩. ಚಿತ್ರದುರ್ಗ | ೪. ಹರ್ತಿಕೋಟೆ |
| ೫. ತರಿಕೆರೆ | ೬. ರತ್ನಗಿರಿ | ೭. ರಾಯದುರ್ಗ | ೮. ಮಿಡಿಗೇರಾ |
| ೯. ಐಮಂಗಲ | ೧೦. ಹಾಗಲವಾಡಿ | ೧೧. ಪಾವಗಡ | ೧೨.ಪೆನುಗೊಂಡ |

**ಮ್ಯಾಸ ಬೇಡರ ೧೨ ಪೆಟ್ಟಿಗೆ ದೇವರುಗಳು**

| | | |
|---|---|---|
| ೧ ಪಚ್ಚಪದಿ ದೊಡ್ಡ ತಿರುಮಲ ದೇವರು | ಬೇಡರಡ್ಡಿ ಹಳ್ಳಿ | ಚಳ್ಳಕೆರೆ ತಾಲೂಕು |
| ೨. ಪಾಪುಕಂಪಳ ರಂಗಸ್ವಾಮಿ | ಕಂಪಳ ದೇವರ ಹಟ್ಟಿ | ಮೊಳಕಾಲ್ಮೂರು (ತಾ) |
| ೩. ದಡ್ಲು ಮಾರಮ್ಮ | ದೇವರಹಳ್ಳಿ | ಚಳ್ಳಕೆರೆ ತಾಲೂಕು |
| ೪. ಚಂತಗುಂಟ್ಲು ಬೋರೇ ದೇವರು | ಕುದಾಪುರ | ಚಳ್ಳಕೆರೆ ತಾಲೂಕು |
| ೫. ಮಂದಬೊಮ್ಮ ದೇವರು | ದೊಣ ಮಂಡಲಹಟ್ಟಿ | ಚಳ್ಳಕೆರೆ |
| ೬. ಪೆದ್ದಕ್ಕ ರಾಯಮ್ಮ (ಮಾರಮ್ಮ) | ಗೌರಸಮುದ್ರ | ಚಳ್ಳಕೆರೆ |
| ೭. ಮಂಗಪೋಟೆ ಓಬಳದೇವರು | ತಾಳಿಕೆರೆ | ರಾಯದುರ್ಗ |
| ೮. ನಲ್ಲ ಚೆರವು ಓಬಳದೇವರು | ರುದ್ರಮ್ಮನಹಳ್ಳಿ | ಚಳ್ಳಕೆರೆ |
| ೯. ಮಲ್ಲಿನಾಯಕ ಬೊಮ್ಮದೇವರು | ವರವು | ಚಳ್ಳಕೆರೆ |
| ೧೦. ಬಂಗಾರಿ ದೇವರು | ನನ್ನಿವಾಳ | ಚಳ್ಳಕೆರೆ |

೧೧. ಬೋಸೇ ದೇವರು ಬೋಸೇದೇವರಹಟ್ಟಿ ಚಳ್ಳಕೆರೆ

೧೨. ಮಾಕನಡುಕು ಓಬಳದೇವರು ಮಾಕನಡುಕು ಕೂಡ್ಲಿಗಿ

ಎಂ.ಜಿ. ಈಶ್ವರಪ್ಪ ಅವರು 'ಮ್ಯಾಸಬೇಡರು' ಎಂಬ ಕಿರುಪುಸ್ತಕದಲ್ಲಿ ಪೆಟ್ಟಿಗೆ ದೇವರನ್ನು ಪೂಜಿಸುವ ಮ್ಯಾಸಬೇಡರು ಹನ್ನೆರಡು ಪೆಟ್ಟಿಗೆಗಳನ್ನು ಹನ್ನೆರಡು ಜನ ದೇವತೆಗಳೆಂದು ಮತ್ತು ಅವರ ಕುಲವನ್ನು ಆಶೀರ್ವದಿಸುವ ಹನ್ನೆರಡು ಋಷಿಮುನಿಗಳೆಂದು ಬರೆದಿದ್ದಾರೆ.[೧] ಈ ಪೆಟ್ಟಿಗೆಗಳು ಒಂದು ಅಡಿ ಉದ್ದ, ಅರ್ಧ ಅಡಿ ಅಗಲ, ಮುಕ್ಕಾಲು ಅಡಿ ಎತ್ತರವಿರುತ್ತದೆ. ಇವುಗಳಲ್ಲಿ ಎರಡೆರಡು ಸಾಲಿಗ್ರಾಮಗಳಿರುತ್ತವೆ. ಕೆಲವು ಕಡೆ ಈ ಪೆಟ್ಟಿಗೆ ತೆಗೆದು ತೋರಿಸಿದರೆ ಬೆಂಕಿ ಹತ್ತಿ ಉರಿದು ಹೋಗುವುದೆಂದು ಎಚ್ಚರಿಸುತ್ತಾರೆ. ಪೆಟ್ಟಿಗೆಗಳು ಮರದಿಂದ ಮಾಡಿದವು ಮತ್ತು ತೆಗೆಯಲು ಬಾರದಂಥವುಗಳಾಗಿರುತ್ತವೆ. ಒಂದು ಕಡೆ ನೆಲೆ ನಿಲ್ಲದೆ ಬೇಟೆಯಾಡುತ್ತಾ ಬೇರೆ ಕಡೆಗೆ ಸಾಗುವ ಅಲೆಮಾರಿ ಜನಾಂಗವಾಗಿದ್ದ ಇವರು ಸಾಗಾಣಿಕೆಗೆ ಅನುಕೂಲವಾಗಲೆಂದು ಪೆಟ್ಟಿಗೆ ದೇವರುಗಳನ್ನು ನಿರ್ಮಾಣ ಮಾಡಿರಬೇಕು. ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮ್ಯಾಸಬೇಡ ಸಮುದಾಯವು ಇಂದು ಆಧುನೀಕರಣ. ಜಾಗತೀಕರಣ ಪ್ರಕ್ರಿಯೆಗಳಲ್ಲಿ ಸಿಲುಕಿ ನಗರಪ್ರದೇಶಗಳಲ್ಲಿ ಬೆಳೆದು ಶಿಕ್ಷಣದಲ್ಲಿ ಪ್ರಗತಿ ಸಾಧಿಸಿ, ಸರಕಾರಿ ಉದ್ಯೋಗದಲ್ಲಿ ಸೇರಿಕೊಂಡಿದ್ದರೂ ತನ್ನ ಹಿಂದಿನ ಧಾರ್ಮಿಕ ಸಂಪ್ರದಾಯವನ್ನು ಮಾತ್ರ ಬಿಟ್ಟು ಕೊಟ್ಟಿಲ್ಲ. ತಮ್ಮ ಧಾರ್ಮಿಕ ಸಂಪ್ರದಾಯಗಳನ್ನು ಸಮೃದ್ಧಿಯಿಂದ ಬೆರಗುಗೊಳಿಸಿದ್ದಾರೆ.

## ಕಟ್ಟೆ ಮನೆಗಳು

### ಬುಡಕಟ್ಟು ನ್ಯಾಯ ಪಂಚಾಯ್ತಿ

ಜನಾಂಗಿಕವಾಗಿ, ಪೌರಾಣಿಕವಾಗಿ ಮತ್ತು ಐತಿಹಾಸಿಕವಾಗಿ ಬೇಡರು ಕರ್ನಾಟಕದಲ್ಲಿ ವಾಲ್ಮೀಕಿ ಮತ್ತು ನಾಯಕ ಎಂದು ಕರೆಸಿಕೊಳ್ಳುತ್ತಾರೆ. ಬೇಡರೆಂದರೆ ಪಾಳೆಗಾರರು, ದೊರೆಗಳು, ಸಂಸ್ಥಾನಿಕರು ಎಂದು ತಿಳಿಯುವುದು ವಾಡಿಕೆ. ಆದರೆ ಅವರ ಪರಂಪರಾನುಗತ ಜೀವನ ಶೈಲಿ ಆಚಾರ-ವಿಚಾರಗಳನ್ನು ಮೈಗೂಡಿಸಿಕೊಂಡು ಇನ್ನೂ ಸಂಕಷ್ಟ ಪರಿಸ್ಥಿತಿಗಳನ್ನು ಎದುರಿಸುತ್ತಿರುವ ಅನೇಕ ಕುಟುಂಬಗಳನ್ನು ಕಾಣಬಹುದು. ಒಂದು ಕಾಲಕ್ಕೆ ರಾಜಕೀಯವಾಗಿ ಅಧಿಕಾರವನ್ನು ಚಲಾಯಿಸಿದಂತಹ ಅನೇಕ ಬೇಡ ಕುಟುಂಬಗಳು ಸಾಮಾನ್ಯ ಬೇಡರಿಂದಲೇ ಪ್ರತ್ಯೇಕವಾಗುತ್ತಲೇ ಬಂದರು. ಇಂದಿಗೂ ಸಾಮಾನ್ಯ ಬೇಡ ಕುಟುಂಬಗಳೊಂದಿಗೆ ಪಾಳೇಗಾರ ದೊರೆ ಸಂಸ್ಥಾಪಕರು ಕುಟುಂಬಗಳು ಯಾವುದೇ ವೈವಾಹಿಕ ಸಂಪರ್ಕವನ್ನು ಮಾಡುವುದಿಲ್ಲ. ಅವರು ನಾಗರಿಕ ಪ್ರಪಂಚದ ಸಂಪೂರ್ಣ ಪ್ರಭಾವಕ್ಕೆ ಒಳಗಾಗಿದ್ದಾರೆ. ಬುಡಕಟ್ಟು ಜೀವನ ಪದ್ದತಿಯಲ್ಲಿ ನೆಲಸಿದ ಬೇಡರು ಅದೇ ಸ್ಥಿತಿಯನ್ನು ಮುಂದುವರೆಸಬೇಕೋ ಅಥವಾ ಬದಲಾದ ಪ್ರಪಂಚದೊಡನೆ ಹೊಂದಿಕೊಳ್ಳಬೇಕೋ ಎಂಬ ಸಂದಿಗ್ಧ

ಸ್ಥಿತಿಯಲ್ಲಿ ಇಂದು ಬದುಕುತ್ತಿದ್ದಾರೆ. ಬುಡಕಟ್ಟು ಜನರ ಜೀವನ ವಿಧಾನ ಅವರ ಉಡುಗೆ, ತೊಡುಗೆ, ಭಾಷೆ, ಆಚಾರ, ವಿಚಾರಗಳು ಅಧ್ಯಯನದ ದೃಷ್ಟಿಯಿಂದ ತೀರಾ ಮಹತ್ವವನ್ನು ಪಡೆದಿವೆ. ಬೇಡರಲ್ಲಿದ್ದ ಕುಲಾಚಾರ "ನ್ಯಾಯಪದ್ದತಿ" ಪಾರಂಪರಾನುಗತವಾಗಿ ಮುಂದುವರೆದುಕೊಂಡು ಬಂದಿದ್ದು ಈಚಿನ ದಿನಗಳಲ್ಲಿ ಅದು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿದೆ ಎಂದರೆ ತಪ್ಪಾಗಲಾರದು.

ಕರ್ನಾಟಕದ ಬೇಡರಲ್ಲಿ ಊರು ಬೇಡರು ಮತ್ತು ಮ್ಯಾಸಬೇಡರು ಎಂಬ ಎರಡು ಮುಖ್ಯ ಪಂಗಡಗಳುಂಟು. ಈ ಎರಡು ಪಂಗಡಗಳಲ್ಲಿ 'ಕಟ್ಟೆಮನೆ, ಕುಲಾಚಾರ, ಪದ್ಧತಿಗಳು ಪ್ರತ್ಯೇಕವಾಗಿ ಕಂಡು ಬರುತ್ತವೆ. ಆದರೆ ಈ ಎರಡು ಕುಲಾಚಾರ ಪದ್ಧತಿಯಲ್ಲಿ ಸಾಮ್ಯತೆ ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ "ಬೇಡ ಬುಡಕಟ್ಟು" ಎಂಬ ಒಂದೇ ದೃಷ್ಟಿಕೋನವನ್ನು ನೋಡಬಹುದು. ಊರುಬೇಡರು ಕನ್ನಡ ಭಾಷೆಯನ್ನು ಮ್ಯಾಸಬೇಡರು ತೆಲುಗು ಭಾಷೆಯನ್ನು ಮಾತನಾಡುತ್ತಾರೆ. ಯಾವ ಯಾವ ಪ್ರದೇಶದಲ್ಲಿ ಈ ಪಂಗಡದವರು ಹೆಚ್ಚಾಗಿ ನೆಲೆಸಿದ್ದಾರೋ ಅದೇ ಪ್ರದೇಶದ ವ್ಯಾಪ್ತಿಯಲ್ಲಿ ಕುಲಾಚಾರ, ನ್ಯಾಯಪಂಚಾಯ್ತಿ, ಹಂತಗಳು ಕಂಡು ಬರುತ್ತವೆ. ಒಟ್ಟಿನಲ್ಲಿ ಊರ ಬೇಡರ ಮತ್ತು ಮ್ಯಾಸಬೇಡರ ಕಟ್ಟೆಮನೆಗಳು ಬೇರೆ ಬೇರೆಯಾಗಿ ಕಂಡು ಬರುತ್ತವೆ. ಉದಾ: ಊರು ಬೇಡರಿಗೆ ಕಟ್ಟೆಮನೆ ಕನಕಗಿರಿ ಮತ್ತು ಗುರು ಮನೆಯಾಗಿ ಕಂಡು ಬಂದರೆ ಕಂಪಳದೇವರ ಹಟ್ಟಿ, ನನ್ನಿವಾಳ ಮ್ಯಾಸನಾಯಕರಿಗೆ ಕಟ್ಟೆಮನೆ ಗುರುಮನೆಯಾಗಿ ಕಂಡು ಬರುತ್ತದೆ.

ನ್ಯಾಯಾಂಗ ಚೌಕಟ್ಟನ್ನು ಬುಡಕಟ್ಟುಗಳು ಹಿಂದಿನ ಕಾಲದಿಂದಲೂ ಮುಂದುವರೆಸಿ ಕೊಂಡು ಬಂದಿವೆ.

**ಹಂತಗಳು**

ಬೇಡ ಬುಡಕಟ್ಟು ನ್ಯಾಯ ಪಂಚಾಯ್ತಿ ವ್ಯವಸ್ಥೆಯಲ್ಲಿ ಒಟ್ಟು ಐದು ಹಂತಗಳನ್ನು ಕಾಣುತ್ತೇವೆ.

ಸಂಸ್ಥಾನ, (ಅರಸ)

ಪಂಚಾಯ್ತಿ (ಗ್ರಾಮಸ್ಥರು)

ಗುಡಿಕಟ್ಟೆ (ಯಜಮಾನರು)

ಕಟ್ಟೆಮನೆ (ಯಜಮಾನರು)

ಬಳಗಸ್ಥರು ( ಕುಲಸ್ಥರು)

ಸಂಸ್ಥಾನದ ಮುಖ್ಯಸ್ಥರು (ರಾಜ) ಪರಮಾವಧಿ ಕಾಲದ ಒಡೆಯ ತನ್ನ ಸಂಸ್ಥಾನದ ವ್ಯಾಪ್ತಿ ಒಳಗಡೆ ತಾನೇ ಶ್ರೇಷ್ಠ ಅಂತಿಮ ಅಧಿಕಾರ ಎಲ್ಲಾ ವಿಷಯಗಳಲ್ಲಿ ರಾಜನೇ ಅಂತಿಮ ಅಧಿಕಾರವನ್ನು

ಹೊಂದಿದ್ದನು. ಆದರೆ ಕುಲಾಚಾರ ವಿಷಯಗಳನ್ನು ಆಯಾಯ ಕುಲಾಚಾರಗಳಲ್ಲ. ಪದ್ಧತಿಗನುಗುಣವಾಗಿಯೇ ತೀರ್ಪು ನೀಡಬೇಕಾಗುತ್ತದೆ. ತನ್ನತನವನ್ನು ಅರಸನು ಅಲ್ಲಿ ತೋರಿಸುವಂತಿಲ್ಲ. ಸಂಸ್ಥಾನದ ಹಂತದವರೆಗೆ ಬಂದಂತಹ ವ್ಯಾಜ್ಯಗಳನ್ನು ಕೂಲಂಕುಷವಾಗಿ ತಿಳಿದುಕೊಂಡು ಕೆಳಹಂತದಿಂದ ಮಾಹಿತಿಗಳ್ನು ತರಿಸಿಕೊಂಡು ದಾಖಲೆಮಾಡಿ ವಿಚಾರಣೆಗೊಳ ಪಡಿಸಿ ತೀರ್ಪನ್ನು ಪ್ರಕಟಿಸಬೇಕಿತ್ತು. ಒಂದೇ ಮಾತಿನಲ್ಲಿ ಹೇಳುವುದಾದರೆ ಕುಲಾಚಾರ ವಿಷಯಗಳಲ್ಲಿ ರಾಜನು ತಲೆ ಹಾಕುತ್ತಿರಲಿಲ್ಲ ಆದರೆ ಕುಲಗಳೆಲ್ಲ ರಾಜನ ಮೇಲಿದ್ದ ಭಕ್ತಿ, ವಿಶ್ವಾಸ ಅವರು ಕೊಡುತ್ತಿದ್ದ ಸಂಸ್ಥಾನ ಕಾಣಿಕೆಯಿಂದ ತಿಳಿದು ಬರುತ್ತದೆ. ಸಂಸ್ಥಾನದವರೆಗೆ ಬರುವ ವ್ಯಾಜ್ಯಗಳ ಸಂಖ್ಯೆ ತುಂಬಾ ಕಡಿಮೆ ಮತ್ತು ಈ ಹಂತದ ನ್ಯಾಯ ಪಂಚಾಯ್ತಿ ನಿಧಾನಗತಿಯಿಂದ ಕೂಡಿತ್ತು.

ಸಂಸ್ಥಾನ ಕೆಳಹಂತದ ನ್ಯಾಯ ಪಂಚಾಯ್ತಿಯೇ ಗ್ರಾಮಸ್ಥರು ಗ್ರಾಮಸ್ಥರನ್ನು ಪಂಚಾಯ್ತಿಯ ವರೆಂದು ಕರೆಯಲಾಗುತ್ತದೆ. ಒಂದು ಗ್ರಾಮದಲ್ಲಿ (ಹಟ್ಟಿ) ಅನೇಕ ಕುಲಗಳಿದ್ದರೆ ಆ ಕುಲಗಳ ಮೇಲಿನ ಹಂತದ ಅಧಿಕಾರವನ್ನು ಗ್ರಾಮಸ್ಥರು ಪಡೆದಿದ್ದರು. ಆಯಾ ಕುಲಾಚಾರಗಳನ್ನು ತಿಳಿದು ಕೊಂಡು ಸಂಸ್ಥಾನದವರು ಏನಾದರೂ ಕುಲಾಚಾರಕ್ಕೆ ಸಂಬಂಧಿಸಿದಂತೆ ಮಾಹಿತಿ ಕೇಳಿದರೆ ಆಗ ಆ ಕುಲಾಚಾರ ವಿಷಯವನ್ನು ಸಂಸ್ಥಾನಕ್ಕೆ ತಿಳಿಸಬೇಕಾಗುತ್ತದೆ. ಯಾವುದೇ ಕುಲಾಚಾರ ಪಂಚಾಯ್ತಿ ಯಲ್ಲಿ ಗ್ರಾಮಸ್ಥರು ನೇರವಾಗಿ ಭಾಗವಹಿಸುತ್ತಿರಲಿಲ್ಲ. ಗ್ರಾಮದ ಸಮಗ್ರ ಏಳ್ಗೆ ಗ್ರಾಮಸ್ಥರ ಜವಾಬ್ಧಾರಿ ಯಾಗಿತ್ತು. ಗ್ರಾಮಸ್ಥರ ಅಥವಾ ಕೆಳಹಂತವೇ ಗುಡಿಕಟ್ಟೆ

ಗುಡಿಕಟ್ಟೆ ಪಂಚಾಯ್ತಿ ಬೇಡರಲ್ಲಿ ಅತ್ಯಂತ ಪಾವಿತ್ರ್ಯತೆಯಿಂದ ಕೂಡಿರುವಂತಹದ್ದು ಮತ್ತು ಶ್ರೇಷ್ಠವಾದದ್ದು ಒಂದೊಂದು ಕುಲಕ್ಕೆ ಒಂದೊಂದು ಗುಡಿಕಟ್ಟೆ ಇರುವುದು ಕಂಡು ಬರುತ್ತದೆ. ಆದರೆ ಬೇಡ ಬುಡಕಟ್ಟಿಗೆ ಕಂಪಳದೇವರ ಹಟ್ಟಿ ಸಂಡೂರು, ಕನಕಗಿರಿ ಇತ್ಯಾದಿ ಗುಡಿಕಟ್ಟೆಗಳು ಕಾಣಸಿಗುತ್ತವೆ. ಪ್ರತಿ ವರ್ಷ ಯುಗಾದಿ ಹೊಸ ವರ್ಷದಂದು ತಮ್ಮ ದೇವರುಗಳೊಂದಿಗೆ ಈ ಗುಡಿಕಟ್ಟೆಗೆ ಹೋಗಿ ಬರುವ ಸಂಪ್ರದಾಯವಿತ್ತು. ಈ ಗುಡಿಕಟ್ಟೆಗಳನ್ನು ದೇವರ ಕಟ್ಟೆ ಮನೆಗಳೆಂದು ಕರೆಯುತ್ತಾರೆ.

ಗುಡಿ ಕಟ್ಟೆಗಳ ಕೆಳಗಿನ ಹಂತವೇ ಕಟ್ಟೆಮನೆ. ಅನೇಕ ಗುಡಿಕಟ್ಟೆಮನೆಗಳು ಸೇರಿ ಕಟ್ಟೆಮನೆ ಯಾಗಿದೆ. ಕುಲಾಚಾರಿಗಳಿಗನುಗುಣವಾಗಿ ಕಟ್ಟೆಮನೆಗಳು ರಚನೆಗೊಂಡಿವೆ. ಬೇಡ ಬುಡಕಟ್ಟು ಜನರ ಹೆಚ್ಚು ವ್ಯಾಜ್ಯಗಳು ತೀರ್ಮಾನಗೊಳ್ಳುತ್ತಿದ್ದುದೇ ಇಲ್ಲಿ. ಹೀಗಾಗಿ ಬೇಡರಲ್ಲಿ ಕಟ್ಟೆ ಮನೆ ನ್ಯಾಯ ಪಂಚಾಯ್ತಿ ಅತ್ಯಂತ ಮಹತ್ವ ಪಡೆದಿದೆ. ಇಂತಿಷ್ಟು ಗ್ರಾಮಗಳಿಗೆ ಕಟ್ಟೆಮನೆ ಇರಬೇಕು. ಎಂಬ ನಿಯಮವಿಲ್ಲ. ಕೆಲವೊಮ್ಮೆ ಎರಡು ಮೂರು ಗ್ರಾಮಗಳಿಗೊಂದು ಕಟ್ಟೆಮನೆ ಇದ್ದರೆ ಕೆಲವೊಮ್ಮೆ ೨೦-೩೦ಕ್ಕೂ ಹೆಚ್ಚು ಗ್ರಾಮಗಳಿಗೆ ಒಂದು ಕಟ್ಟೆಮನೆ ಇರುತ್ತಿತ್ತು. ಗೋನೂರು ಕಟ್ಟೆಮನೆ (ಚಿತ್ರದುರ್ಗ ಜಿಲ್ಲ) ೩೩ ಹಳ್ಳಿಗಳನ್ನು ಒಳಗೊಂಡಿದೆ. ಕಟ್ಟೆಮನೆಯ ಮುಖ್ಯಸ್ಥರನ್ನು ರಾಜರೇ ನೇಮಕ ಮಾಡುತ್ತಿದ್ದರು.

ನನ್ನಿವಾಳ ಕಟ್ಟೆಮನೆ, ನಾಯಕನಹಟ್ಟಿ ಕಟ್ಟೆಮನೆ ಅನುಕೂಲಕ್ಕೆ ಸೇರಿದ ಮುಖಂಡರು ಕಟ್ಟೆಮನೆಯ ಯಜಮಾನನ ತೀರ್ಮಾನಗಳನ್ನು ಮೀರುವಂತಿರಲಿಲ್ಲ. ಒಂದು ಕುಲಕ್ಕೆ ಬೇರೊಂದು ಕುಲದವರನ್ನು ಕಟ್ಟೆಮನೆ ಯಜಮಾನನೆಂದು ನೇಮಿಸುತ್ತಿರಲಿಲ್ಲ. ಹರ್ತಿ ಕೋಟೆ ನಾಯಕನಹಟ್ಟಿ ಮುಂತಾದ ಕಟ್ಟೆಯವರು ಮೊದಲು ಕಟ್ಟೆಮನೆ ಮುಖ್ಯಸ್ಥರಾಗಿದ್ದರು. ಒಂದು ಕಟ್ಟೆಗೆ ಸೇರಿದ ಗ್ರಾಮಸ್ಥರು ಬೇರೊಂದು ಕಟ್ಟೆಮನೆಗೆ ಕಟ್ಟೆ ಕಾಣಿಕೆಯನ್ನು ಕೊಡುತ್ತಿರಲಿಲ್ಲ ಅಥವಾ ತಮ್ಮ ಕಟ್ಟೆಗೆ ಸೇರಿದ ಗ್ರಾಮಗಳನ್ನು ಬಿಟ್ಟು ಬೇರೊಂದು ಕಟ್ಟೆಮನೆಗೆ ಸೆರಿದ ಗ್ರಾಮಗಳಲ್ಲಿ ಕಟ್ಟೆ ಕಾಣಿಕೆಗಳನ್ನು ಪಡೆಯುತ್ತಿರಲಿಲ್ಲ.

ಕಟ್ಟೆಮನೆಗೊಂದು (ದೇವರಮನೆ) ಗುರುಮನೆ ಇರುತ್ತಿತ್ತು. ಪೂಜಾರಿ ದಾಸಯ್ಯ ಎಂಬುವವರು ಈ ಗುರು ಮನೆಯ ಮುಖ್ಯಸ್ಥರಾಗಿರುತ್ತಿದ್ದ ಧಾರ್ಮಿಕ ಕಾರ್ಯಗಳಲ್ಲಿ ಇವರು ಭಾಗವಹಿಸುತ್ತಿದ್ದರು. ಉದಾಃ ಮುದ್ರೆ ಹಾಕುವುದು, ಕುಲಭ್ರಷ್ಟರನ್ನು ಕುಲದೊಳಗೆ ಹಾಕಿಕೊಳ್ಳುವುದು, ತಂಗಡಿಸೊಪ್ಪು (ತಾವರೆಗಿಡ) ಎದುರು ನಿಲ್ಲಿಸಿ ಬೇವಿನ ಕಡ್ಡಿಯಿಂದ ನಾಲಿಗೆಯನ್ನು ಸುಟ್ಟು ಗೋಮೂತ್ರದಿಂದ ನಾಲಿಗೆ ತೊಳೆದು ತಮ್ಮ ಕುಲಕ್ಕೆ ಹಾಕಿಕೊಳ್ಳುವ ಪದ್ಧತಿ ಬೇಡರಲ್ಲಿತ್ತು. ಈ ಕೆಲಸವನ್ನು ದಾಸಯ್ಯನೇ ನಿರ್ವಹಿಸುತ್ತಾನೆ. ಮುದ್ರೆ ಹಾಕುವ ಸಂಪ್ರದಾಯ ವೈಷ್ಣವ ಧರ್ಮದ ಪ್ರಭಾವದಿಂದ ಬೇಡರಲ್ಲಿ ಹುಟ್ಟಿಕೊಂಡಿದೆ.

ಕಟ್ಟೆಮನೆ ಕೆಳಹಂತವೇ ಬಳಗಸ್ಥರು. ಬಳಗಸ್ಥರನ್ನು ಹತ್ತು ಬಳಗದವರು ಕುಲಸ್ಥರು ಎಂದು ಕರೆಯುತ್ತಾರೆ. ಯಾವುದೇ ಸಮಸ್ಯೆಯನ್ನು ಮೊದಲು ಬಳಗಸ್ಥರಿಗೆ ತಿಳಿಸಬೇಕಿತ್ತು. ಒಂದರ್ಥದಲ್ಲಿ ಕುಲಾಚಾರ ನಿಯಮಗಳು ರೂಪಗೊಳ್ಳುತ್ತಿದ್ದುದೇ ಈ ಹಂತದಲ್ಲಿ. ಕುಲಾಚಾರ ಪದ್ಧತಿಗಳಿಗೆ ಅನುಸಾರವಾಗಿ ಹಬ್ಬ, ಉತ್ಸವ, ಮದುವೆ, ಹುಟ್ಟು, ಸಾವು ಸಂದರ್ಭಗಳಲ್ಲಿ ನಡೆದುಕೊಳ್ಳುವಂತೆ ಜನರಿಗೆ ತಿಳಿಸುವ ಜವಾಬ್ಧಾರಿ ಈ ಕುಲಸ್ಥರ ಮೇಲಿತ್ತು. ಬೇಡರಿಗೆ ಕುಲಸ್ತರೆಂದರೆ ತುಂಬಾ ಭಯ, ಗೌರವ. ಯಾವುದೇ ತೀರ್ಮಾನಗಳನ್ನು ಕೈಗೊಳ್ಳುವ ಮುನ್ನ ಕುಲಸ್ಥರ ಮನವಿಗಳನ್ನಾಗಲಿ ಇಲ್ಲವೇ ಹೇಳಿಕೆಯನ್ನಾಗಲಿ ಮುಖ್ಯವಾಗಿ ಗಮನಿಸಲಾಗುತ್ತಿತ್ತು. ಕುಲ ಕುಲಗಳ ನಡುವೆ ಜಗಳಗಳನ್ನು ಈ ಕುಲಸ್ಥರೇ ಸೇರಿ ಬಗೆಹರಿಸುತ್ತಿದ್ದರು. ಕುಲಸ್ಥರು ಕೈತಪ್ಪು ಬಾಯಿತಪ್ಪುಗಳು ನಡೆಯದಂತೆ ನೋಡಿಕೊಳ್ಳುತ್ತಿದ್ದರು. ಒಂದು ವೇಳೆ ಈ ತಪ್ಪುಗಳನ್ನು ಮಾಡಿದವರಿಗೆ ವೀಳ್ಯೆ ಅನ್ನ (ಕುಲದೂಟ) ಶಿಕ್ಷೆಯನ್ನು ನೀಡುತ್ತಿದ್ದರು. ಆಯಾಗಾರ ಸಮಸ್ಯೆಗಳನ್ನು ಇವರು ಬಗೆಹರಿಸುತ್ತಿದ್ದರು. ವೀಳ್ಯೆ(ಅಡಿಕೆ–ಎಲೆ)ದ ಮೇಲೆ ದೈವ ಭಾವನೆಯನ್ನು ಬೇಡರು ಹೊಂದಿದ್ದರು. ವೀಳ್ಯೆವನ್ನು ಕೊಡುವೆ ಎಂದರೆ ಆತನು ತನ್ನ ತಪ್ಪನ್ನು ಒಪ್ಪಿಕೊಂಡಂತೆಯೇ ಸರಿ. ಬಳಗಸ್ಥರ ತೀರ್ಪುಗಳನ್ನು ದಿಕ್ಕರಿಸಿದವನು ಕುಲದಿಂದಲೇ ಹೊರ ಹೋಗಬೇಕಗಿತ್ತು. ಅವರೊಡನೆ ಯಾರು ಸಂಪರ್ಕ ಹೊಂದುವಂತಿರಲಿಲ್ಲ.

## ದಂಡ–ಶಿಕ್ಷೆಗಳು

ಸಂಸ್ಥಾನದವರು, ಗುಡಿಕಟ್ಟೆಯವರು, ಕಟ್ಟಮನೆಯವರು, ಮತ್ತು ಬಳಗಸ್ಥರು ಅಪರಾಧ ಪ್ರಮಾಣಕ್ಕೆ ತಕ್ಕಂತೆ ಶಿಕ್ಷೆಯನ್ನು ದಂಡವನ್ನು ವಿಧಿಸುತ್ತಿದ್ದರು. ಕೈತಪ್ಪು ಬಾಯಿತಪ್ಪುಗಳಂತಹ ಸಾಧಾರಣ ತಪ್ಪುಗಳಿಗೆ ವೀಳ್ಯೆ ಮತ್ತು ಕುಲದೂಟಂತಹ ದಂಡವನ್ನು ಹಾಕಲಾಗುತ್ತಿತ್ತು. ಇದರಿಂದಾಗಿ ಆರ್ಥಿಕವಾಗಿ ಮತ್ತು ನೈತಿಕವಾಗಿ ಅಪರಾಧಿಯನ್ನು ಶಿಕ್ಷಿಸಿದಂತೆ ಮತ್ತು ಮುಂದೆ ತಪ್ಪು ಮಾಡದಂತೆ ಬುದ್ಧಿ ಮಾತನ್ನು ಹೇಳುವಂತೆಯೂ ಆಗುತ್ತಿತ್ತು. ಕುಲಸ್ಥರು ಈ ರೀತಿಯ ಶಿಕ್ಷೆಯನ್ನು ಹಾಕುತ್ತಿದ್ದರು. ಕೆಲವೊಮ್ಮೆ ಹೊಕ್ಕು ಬಳಕೆ ಶಿಕ್ಷೆಯನ್ನು ನೀಡುತ್ತಿದ್ದರು. ಈ ಶಿಕ್ಷೆಗೆ ಗುರಿಯಾದವರೊಡನೆ ಅವರೊಂದಿಗೆ ಸಂಪರ್ಕ ಏರ್ಪಡಿಸುವುದನ್ನು ನಿಷೇಧಿಸಲಾಗಿತ್ತು.

ಪರಕುಲಸ್ಥರೊಡನೆ ಸಂಪರ್ಕ ಹೊಂದಿದ್ದರೆ ಅವರಿಗೆ ಕಟ್ಟೆದಂಡ ಕುಲದೂಟ ಮತ್ತು ವೀಳ್ಯೆಯಂತ ದಂಡಗಳನ್ನು ಪಡೆದು ಶುದ್ಧಿ ಮಾಡುವ ಮೂಲಕ ಕುಲದೊಳಗೆ ಸೇರಿಸಿಕೊಳ್ಳಲಾಗು ತ್ತಿತ್ತು. ಈ ರೀತಿಯ ದಂಡಗಳನ್ನು ಚಪ್ಪಲಿಯನ್ನು ಕೈಯಲ್ಲಿ ಹಿಡಿದವನು ಇಲ್ಲವೇ ಹೊಡೆಸಿ ಕೊಂಡವನು ಜೈಲು ಶಿಕ್ಷೆ ಅನುಭವಿಸಿ ಬಂದಂತವನು, ಕನ್ಯೆ ಹೆಣ್ಣನ್ನು ಕೆಡಿಸಿದವನು, ಆ ಹೆಣ್ಣನ್ನು ಮದುವೆಯಾಗಬೇಕು ಮತ್ತು ಅಪರಾಧ ದಂಡ ಕೊಟ್ಟು ಕುಲದೂಟ ಹಾಕಿಸಬೇಕು.

ಕುಲಬಹಿಷ್ಕಾರಕ್ಕೆ ಒಳಗಾದವನನ್ನು ಹುಟ್ಟು, ಸಾವು, ಮದುವೆ, ಹಬ್ಬ, ಉತ್ಸವಗಳಂತಹ ಸಾಮಾಜಿಕ ಕಾರ್ಯಗಳಿಂದ ದೂರವಿಡಲಾಗುತ್ತಿತ್ತು. ಕ್ರಿ.ಶ. ೧೧ನೇ ಶತಮಾನದಲ್ಲಿ ಜಾರಿಯ ಲ್ಲಿದ್ದಂತಹ ಕೆಲವು ಶಿಕ್ಷೆ ದಂಡಗಳು ಇಂತಿವೆ. ಅಂತರ್‌ಜಾತಿಯವರು ಅಂಗಡಿ ಬೀದಿಗೆ ಮೆರವಣಿಗೆ ಬಂಡಿಯನೇರಿ ಬಂದರೆ ೧೨ ಗದ್ಯಾಣ ದಂಡ ಇದನ್ನು ಮೀರಿದರೆ ದೇವರ ಆಣೆ ಹೊಡೆದರೆ ೧೨ ಪಣ ಅಡಿಕೆ ಎಲೆ ಜಗಳ ಉಗುಳಿದರೆ ೬ ಪಣ, ಚಪ್ಪಲಿಯಿಂದ ಹೊಡೆದರೆ ೬ ಪಣ ಕತ್ತಿಯನ್ನು ಝಳಪಿಸಿದರೆ ೧೨ ಪಣ, ಕತ್ತಿಯಿಂದ ಇರಿದರೆ ೩ ಗದ್ಯಾಣ ಹೊನ್ನು, ಸಾಯಿಸಿದರೆ ಸಾವೇ ಶಿಕ್ಷೆ. ಈ ಶಿಕ್ಷೆ ದಂಡಗಳಿಗೆ ತಪ್ಪಿ ನಡೆದರೆ ಕುಲಾಚಾರದಿಂದ ಮತ್ತು ಶಿವಾಚಾರದಿಂದ ಹೊರಗಿಡಲಾಗುತ್ತಿತ್ತು.

## ಬದಲಾಗುತ್ತಿರುವ ಪ್ರಪಂಚದ ಬುಡಕಟ್ಟು ನ್ಯಾಯ ಪಂಚಾಯ್ತಿ

ಇಂದು ಅನೇಕ ಬುಡಕಟ್ಟುಗಳು ಅನೇಕ ಕಾರಣಗಳಿಂದಾಗಿ ಮೂಲ ಸ್ವರೂಪವನ್ನು ಕಳೆದು ಕೊಳ್ಳುತ್ತಲಿವೆ. ನಾಗರಿಕತೆ ಆಧುನಿಕತೆ ಪ್ರಭಾವದ ಎಲ್ಲಾ ಮಗ್ಗಲುಗಳ ಪ್ರಭಾವ ಬುಡಕಟ್ಟು ಜನರಲ್ಲಿ ತಲುಪಿ ಭೂಮಿ, ಕಾಡು, ಆಕಾಶ, ಜಲ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ಅಗ್ನಿ ಮುಂತಾ ದವುಗಳೇ ನಮ್ಮ ಸರ್ವಶಕ್ತಿ ಎಂದು ನಂಬಿದ್ದ ಜನರಲ್ಲಿಗೆ ಹೋದಾಗ ಅವರಿಂದ ಬರುವ ಉತ್ತರ ಇದರಿಂದ ನಮಗೇನು ಲಾಭ? ಅದನ್ನೆಲ್ಲಾ ತೆಗೆದುಕೊಂಡು ನೀವೇನು ಮಾಡುತ್ತೀರಾ? ಸರಕಾರ ಯೋಜನೆಗಳು ಕಾನೂನುಗಳು ಶಿಕ್ಷಣ, ಸಂಘ ಸಂಸ್ಥೆಗಳು ಜಾಗೃತಿ ಹೋರಾಟ ಸಂಘಟನೆಗಳು ಮುಂತಾದವುಗಳಿಂದ ಬುಡಕಟ್ಟುಗಳಿಗೆ ಬದಲಾವಣೆಯ ಗಾಳಿ ಬೀಸುತ್ತದೆ.

ಬೇಡ ಬುಡಕಟ್ಟು ನ್ಯಾಯ ಪಂಚಾಯ್ತಿ ವ್ಯವಸ್ಥೆಯನ್ನು ಎಸಲುಗಳಲ್ಲಿ ಮಾತ್ರ ಇಂದು ನಾವು ಕಾಣಬಹುದು. ನೈತಿಕತೆ ಮತ್ತು ದೈವತ್ವದ ನೆಲೆಯ ಮೇಲೆಯೇ ರಚನೆಗೊಂಡಿದ್ದ ಈ ನ್ಯಾಯ ವ್ಯವಸ್ಥೆಯ ಬಗ್ಗೆ ಅಸಡ್ಡೆ ಭಾವನೆ ಮೂಡಿ ಬಂದಿದೆ. ಅವರಲ್ಲಿ ಹಿರಿಯರ, ಬಗ್ಗೆ ದೇವರ ಬಗ್ಗೆ, ನೈತಿಕತೆಯ ಬಗ್ಗೆ ನಂಬಿಕೆ ಕಡಿಮೆಯಾಗಿದೆ. ಕೆಟ್ಟವೂಟ (ಹಣದ ಆಸೆ) ಬಿಟ್ಟಿ ಊಟಕ್ಕಾಗಿ (ಅನ್ನದ ಆಸೆ) ಇಂದು ಮರೆಯಾಗುವ ಸ್ಥಿತಿಯಲ್ಲಿರುವದು ಬೇಡರಲ್ಲಿ ಕಾಣಸಿಗುತ್ತದೆ. ಆಧುನಿಕ ಪ್ರಪಂಚದಲ್ಲಿ ಸವಾಲುಗಳನ್ನು ಎದುರಿಸಿ ಅವರ ಜೊತೆಯಲ್ಲಿ ಮುಂದುವರೆಯುವ ತವಕದಲ್ಲಿ ಬೇಡ ಬುಡಕಟ್ಟು ತನ್ನತನವನ್ನು ಕಳೆದುಕೊಳ್ಳುತ್ತಾ ಬಂದಿವೆ. ಹಾಗೇ ಬೇಡರಲ್ಲಿದ್ದ ಕೆಲವು ನಿರ್ಬಂಧನೆಗಳು, ಆಚರಣೆಗಳು ಕಟ್ಟೆಮನೆ ನ್ಯಾಯ ವ್ಯವಸ್ಥೆಗೆ ದಕ್ಕೆ ತಂದವು ಎಂದು ಕಾಣುತ್ತದೆ.

ನ್ಯಾಯ ತೀರ್ಮಾನಗಳು ಕುಲದೇವತೆಯ ಮುಂದೆ ಹಿರಿಯರ ಸಮ್ಮುಖದಲ್ಲಿ ನಡೆಯುತ್ತಿದ್ದವು. ತಪ್ಪಿತಸ್ತ ಕಟ್ಟೆಮನೆಯ ಪಂಚಾಯತಿಗೆ ಅಥವಾ ಹಿರಿಯರಿಗೆ ಅಂಜದಿದ್ದರೂ ಅಲ್ಲಿ ಸೇರಿದ ಹಿರಿಯರಿಗೆ ಅಂಜಬೇಕಾಗುತ್ತಿತ್ತು. ಹಿರಿಯರಿಗೆ ಅಂಜದಿದ್ದರೂ ಅಲ್ಲಿ ನೆಲೆಸಿರುವ ದೇವತೆಗೆ ತಲೆಬಾಗಲೇ ಬೇಕಾಗಿತ್ತು. ಹೀಗಾಗಿ ಪ್ರತಿಯೊಂದು ಹಂತದಲ್ಲಿಯೂ ತಮ್ಮದೇ ಆದ ನೀತಿ ನಿಯಮಗಳನ್ನು ಸೃಷ್ಟಿಸಿಕೊಂಡು ಪ್ರಾಮಾಣಿಕತೆಯಿಂದ ಬದುಕುತ್ತಿದ್ದ ಬುಡಕಟ್ಟುಗಳು ಅನೇಕ ಕಾಲದವರೆಗೆ ಗ್ರಾಮ ಪಟ್ಟಣಗಳ ನಾಗರಿಕತೆಗೆ ಅನಾಗರಿಕತೆಯೇ ಕಂಡರು.

ಚಿತ್ರದುರ್ಗ ಜಿಲ್ಲೆಯಲ್ಲಿ ವಾಸಿಸುವ ಮ್ಯಾಸಬೇಡ ನಾಯಕರಿಗೆ ಬಹು ಮುಖ್ಯವಾದ ಹನ್ನೆರಡು ಕಟ್ಟೆಮನೆಗಳಿವೆ. ಅವು ಕೆಳಗಿನಂತಿವೆ.

೧. ಗೋನೂರು – ಚಿತ್ರದುರ್ಗ ತಾಲೂಕು

೨. ಕಾಮಗೇತನಹಳ್ಳಿ – ಜಗಳೂರು ತಾಲೂಕು

೩. ಹಿರೇಹಳ್ಳಿ – ಚಳ್ಳಕೆರೆ

೪. ಓಬನಹಳ್ಳಿ – ಚಳ್ಳಕೆರೆ

೫. ಮಲ್ಲೋರಹಳ್ಳಿ – ಚಳ್ಳಕೆರೆ

೬. ಅಡವಿ ವಾರೇನಹಳ್ಳಿ – ಕೂಡ್ಲಿಗಿ ತಾಲೂಕು

೭. ಕೋನಸಾಗರ – ಮೊಳಕಾಲ್ಮೂರು

೮. ತಾಳಿಕೆರೆ – ಮಡಕಶಿರಾ ತಾಲೂಕು ಅನಂತಪುರ ಜಿಲ್ಲೆ ಆಂಧ್ರ ಪ್ರದೇಶ

೯. ಮುತ್ತಿಗಾರಹಳ್ಳಿ – ಮೊಳಕಾಲ್ಮೂರು ತಾಲೂಕು

೧೦. ನಾಯಕನಹಟ್ಟಿ - ಚಳ್ಳಕೆರೆ ತಾಲೂಕು

೧೧. ಹಿರೇಮಲ್ಲನಹೊಳೆ - ಜಗಳೂರು, ಚಳ್ಳಕೆರೆ ತಾಲೂಕು

೧೨. ನನ್ನಿವಾಳ - ಚಳ್ಳಕೆರೆ ತಾಲೂಕು

ಮೇಲೆ ಹೇಳಿದ ಹನ್ನೆರಡು ಗ್ರಾಮಗಳ ಕಟ್ಟೆಮನೆಗಳಲ್ಲಿ ತಾಳಿಕೆರೆ, ಜಗಳೂರು ಕಟ್ಟೆಮನೆ ಬಿಟ್ಟರೆ ಉಳಿದೆಲ್ಲವು ಚಳ್ಳಕೆರೆ, ಮೊಳಕಾಲ್ಮೂರು ತಾಲೂಕುಗಳಲ್ಲಿಯೇ ಬರುತ್ತವೆ. ಹನ್ನೆರಡು ಕಟ್ಟೆಮನೆಗಳಲ್ಲಿ ಮೂರು ಕಟ್ಟೆಮನೆಗಳು ಅತ್ಯಂತ ಮುಖ್ಯವಾದವು. ಗೋನೂರು, ನನ್ನಿವಾಳ ನಾಯಕನಹಟ್ಟಿ ಮಿಕ್ಕ ಒಂಭತ್ತು ಕಟ್ಟೆಮನೆಗಳಲ್ಲಿ ತೀರ್ಮಾನವಾಗುತ್ತಿದ್ದವು ಯಾವುದೇ ಪ್ರಮಾಣದ ನ್ಯಾಯ ವ್ಯಾಜ್ಯಗಳು ನಾಯಕನಹಟ್ಟಿ, ಗೋನೂರು, ನನ್ನಿವಾಳದ ಕಟ್ಟೆಮನಿ ಯಜಮಾನರ ಸಮ್ಮುಖದಲ್ಲಿ ತೀರ್ಮಾನವಾಗಲೇಬೇಕು. ಅಲ್ಲಿಯ ತೀರ್ಮಾನಕ್ಕೆ ಅಪರಾಧಿಗಳು ಫಿರ್ಯಾದು ತಂದವರು ತಲೆಬಾಗಲೇ ಬೇಕು. ಈ ಮೂರು ಗ್ರಾಮಗಳು ಈ ಹಿಂದೆಯೇ ತಿಳಿಸಿದಂತೆ ಸಣ್ಣ ಸಣ್ಣ ಪಾಳೆಯ ಪಟ್ಟುಗಳು ಆಗಿದ್ದವು. ವ್ಯಾಸಬೇಡರಲ್ಲಿ, ಗೊಲ್ಲರಲ್ಲಿ ಕೊಲೆ ಮಾಡಿದ ಪಾಪಕ್ಕಿಂತಲೂ ಮೆಟ್ಟಿನಿಂದ ಹೊಡೆಸಿಕೊಂಡಿದ್ದರ ಪಾಪ ಮತ್ತು ಮೈಲಿಗೆ ದೊಡ್ಡದು. ಅಧಿಕ ಪ್ರಮಾಣದ ಅಪರಾಧ ಈಗಲೂ ಮೆಟ್ಟಿನಲ್ಲಿ ಒಡೆದವನನ್ನೂ ಹೊಡೆಸಿ ಕೊಂಡವನನ್ನು ಕುಲದಿಂದ ಹೊರಗೆ ಹಾಕುವುದುಕಂಡು ಬರುತ್ತದೆ. ಒಂದು ವೇಳೆ ಅಪರಾಧಿಗಳು ಮತ್ತು ಬುಡಕಟ್ಟಿನ ಕುಲಕ್ಕೆ ಸೇರಿಸಿಕೊಳ್ಳಲು ಬಯಸುವವರಾದರೆ ಹೊಡೆಸಿ ಕೊಂಡವನು ಒಂದು ಪಟ್ಟು ದಂಡ ಕೊಟ್ಟರೆ ಹೊಡೆದವನು ಎರಡು ಪಟ್ಟು ದಂಡ ಕೊಡಬೇಕು. ಹಾಗೆಯೇ ಬೇಡ ನಾಯಕರ ಹೆಂಗಸು ಕುಲದಿಂದ ಹೊರಗಾಗಿ ಉನ್ನತ ಜಾತಿಯ ವನನ್ನು ಮದುವೆ ಆದರೆ ಅವಳಿಗೆ ದಂಡವಿಲ್ಲ. ಆದರೆ ಬೇಡ ಪಂಗಡಕ್ಕಿಂತ ಕೆಳವರ್ಗದವರನ್ನು ಕೂಡಿದರೆ, ಲಗ್ನವಾದರೆ ಬುಡಕಟ್ಟಿನಿಂದ ಹೊರಗೆ ಹಾಕುವುದುಂಟು

ವ್ಯಾಸಬೇಡರ ಪರಂಪರೆಯಲ್ಲಿ ಯಾರಾದರೂ ಕೋಳಿ ತಿಂದರೆ, ಮಧ್ಯಪಾನ ಮಾಡಿದರೆ ಹಾಗೂ ಈಚಲು ಹಣ್ಣು ತಿಂದರೂ ದಂಡ ಹಾಕುವ ಪದ್ಧತಿ ಇತ್ತು. ಆದರೆ ಈಗ ಅದೆಲ್ಲವೂ ನಿಂತಿದೆ. ವ್ಯಾಜ್ಯಗಳು ಕಟ್ಟೆಮನೆಗೆ ಬರುವುದು ಕಡಿಮೆಯಾಗಿದೆ. ಇದಕ್ಕೆ ಆಧುನೀಕರಣ ಹಾಗೂ ಜಾಗತೀಕರಣ ಹಾಗೂ ಆಧುನಿಕ ಜೀವನವಿಧಾನ ಕಾರಣವಾಗಿದೆ.

**ಗುರು ಸಂಸ್ಥಾನಗಳು**

ಮ್ಯಾಸನಾಯಕ ಜನಾಂಗವು ಕೆಲವು ಪವಿತ್ರ ಸ್ಥಾನಗಳನ್ನು ಗುರುಸ್ಥಾನಗಳೆಂದು ಮನ್ನಿಸು ತ್ತದೆ. ಈ ಗುರು ಸ್ಥಾನಗಳು ಅವರ ಧಾರ್ಮಿಕ ಜೀವನದಲ್ಲಿ ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಮನೆಯಲ್ಲಿ ವಿಶೇಷವಾಗಿ ಮಂಗಲ ಕಾರ್ಯಗಳು ನಡೆದು, ಅವು ಯಶಸ್ವಿಯಾಗಿ ಮುಗಿದ ಮೇಲೆ ಗುರು ಸ್ಥಾನಗಳಿಗೆ ಭೇಟಿ ಕೊಟ್ಟು ಬರುತ್ತಾರೆ. ಮದುವೆ, ಜನನ, ಋತುಮತಿ ಶಾಸ್ತ್ರ ಮುಂತಾದ

ಸಂದರ್ಭಗಳಲ್ಲಿ ಭಕ್ತಿ ಗೌರವಗಳಿಂದ ಗುರುಸ್ಥಾನಗಳಿಗೆ ಹೋಗಿ ಹೂ-ಕಾಯಿ ಮಾಡಿಸಿಕೊಂಡು ಬರುವುದುಂಟು. ಈ ಸಂದರ್ಭದಲ್ಲಿ ಅವರಿಗೆ ಮಜ್ಜಿಗೆಯನ್ನು ತೀರ್ಥಪ್ರಸಾದವೆಂದು ನೀಡಲಾಗುವುದು. ಅಲ್ಲದೇ ತಪ್ಪು ಮಾಡಿದವರಿಗೆ ಕಟ್ಟೆಮನೆ ಕೆಲವು ನಿಬಂಧನೆಗಳನ್ನು ವಿಧಿಸುತ್ತದೆ. ಇಂಥ ನಿಬಂಧನೆಗಳಿಗೆ ಒಳಪಟ್ಟವರು ಗುರುಸ್ಥಾನಗಳಿಗೆ ಹೋಗಿ ಶುದ್ದರಾಗಿ ಬರಬೇಕು. ಗುರುಸ್ಥಾನಗಳಲ್ಲಿರುವ ಪೂಜಾರಿಗಳು ಅಥವಾ ಕಿಲಾರಿಗಳು ತಪ್ಪಿತ ಸ್ಥರಿಗೆ ತೀರ್ಥ ನೀಡಿ ಶುದ್ಧಗೊಳಿಸುತ್ತಾರೆ. ಈ ಗುರು ಸ್ಥಾನಗಳು ಸಾಮಾನ್ಯವಾಗಿ ಹಟ್ಟಿಗಳಾಗಿರುತ್ತವೆ. ಇವುಗಳಲ್ಲಿ ಮೊಳಕಾಲ್ಮೂರು ತಾಲೂಕಿನಲ್ಲಿರುವ ಶ್ರೀಶೈಲ ಎತ್ತುಗಳ ಮುತ್ತಿಗಾ ರಹಳ್ಳಿ ಬಳಿಯ ಎತ್ತುಗಳು ಹೆಚ್ಚು ವಿಶೇಷವಾಗಿವೆ. ಏಕೆಂದರೆ ಅಲ್ಲಿ ಶ್ರೀಶೈಲದ ಎತ್ತುಗಳಿವೆ. ಕಂಪಳದೇವರಹಟ್ಟಿಯಲ್ಲಿರುವ ಕಂಪಳರಂಗಸ್ವಾಮಿಯ ಗುಡಿಯು ಒಂದು ಪ್ರಮುಖ ಗುರುಸ್ಥಾನ ವಾಗಿದೆ. ಈ ಗುಡಿಯಲ್ಲಿ ಕಂಪಳರಂಗಸ್ವಾಮಿ ಹೆಸರಿನ ಪಟ್ಟಿಗೆ ದೇವರು ಇದೆ.

**ಸಂಸ್ಥಾನಗಳು**

ಮುತ್ತಿಗಾರ ಹಳ್ಳಿಯಲ್ಲಿರುವ ಶ್ರೀಶೈಲ ಮುತ್ತಿಗಾರ ಎತ್ತುಗಳ ತಾಣಗಳು ಮ್ಯಾಸಬೇಡರ ಸಂಸ್ಥಾನವಾಗಿದೆ. ಈ ಕೇಂದ್ರ ಮುತ್ತಯ್ಯಗಳ ಹಟ್ಟಿ ಮತ್ತು ಮ್ಯಾಸಬೇಡರ ಧಾರ್ಮಿಕ ಕೇಂದ್ರವೂ ಆಗಿದೆ. ಪ್ರತಿಯೊಂದು ಪೆಟ್ಟಿಗೆ ದೇವರಿಗೆ ಸಂಬಂಧಿಸಿದಂತೆ ಆಯಾ ಹಟ್ಟಿಗಳ ಸಮೀಪದ ಅಡವಿಯಲ್ಲಿ ಎತ್ತುಗಳ ಹಟ್ಟಿ ಇರುತ್ತವೆ.

ಮುಳ್ಳು ಕಳ್ಳಿಗಳ ಬೇಲಿಯೊಂದನ್ನು ನಿರ್ಮಿಸಿ, ಊದಿ ಪದವಿಯೊಂದಿಗೆ ದಟ್ಟವಾದ ಅಡವಿ ಪ್ರದೇಶದಲ್ಲಿ ಕಿಲಾರಿಗಳಿಂದ ಕಾಯಲ್ಪಡುವ ಶ್ರೀಶೈಲದಿಂದ ಬಂದ ಎತ್ತುಗಳ (ರಾಸು) ಸಮೂಹಕ್ಕೆ ರಪ್ಪಕ್ಕೇ ಎತ್ತುಗಳ ಹಟ್ಟಿ, ಎಂದು ಕರೆಯುತ್ತಾರೆ. ಈ ಎತ್ತುಗಳೊಂದಿಗೆ ಆಕಳುಗಳೂ ಇರುತ್ತವೆ.

ಮುತ್ತಿಗಾರ ಹಳ್ಳಿಯ ಕಮರ ಕಾವಲಿನಲ್ಲಿ ಸುಮಾರು ೪೦ ರಿಂದ ೫೦ ರಾಸುಗಳು ಈ ರಪ್ಪದಲ್ಲಿವೆ. ಇಲ್ಲಿರುವ ರಾಸುಗಳು ಶ್ರೀಶೈಲದ ತಮ್ಮ ಆರಾಧ್ಯ ದೈವದಿಂದ ಬಳುವಳಿಯಾಗಿ ಬಂದವುಗಳೆಂದು ನಂಬಿದ್ದಾರೆ. ಇಲ್ಲಿರುವ ರಾಸುಗಳನ್ನು ಕ್ರಯಕ್ಕೆ ಮಾರುವುದಿಲ್ಲ. ಅಲ್ಲದೇ ಇವುಗಳ ಹಾಲು ಮೊಸರನ್ನು ಕ್ರಯಕ್ಕೆ ಕೊಡುವಂತಿಲ್ಲ. ಅವುಗಳ ಗೊಬ್ಬರ ಮಾರುವಂತಿಲ್ಲ. ಕಿಲಾರಿಗಳು ಇಲ್ಲಿ ಮುಖ್ಯ ವ್ಯಕ್ತಿಗಳಾಗಿರುತ್ತಾರೆ. ಇವರನ್ನು ಎತ್ತಿನಕಿಲಾರಿಗಳೆಂದೇ ಕರೆಯುವುದುಂಟು. ಇವರು ಹಟ್ಟಿಗಳ ಸಂಬಂಧವಿಲ್ಲದೆ ಎತ್ತಿನ ಹಟ್ಟಿಯಲ್ಲಿಯೇ ವಾಸವಾಗಿರುತ್ತಾರೆ. ಚಡಿ ಚಲ್ಲಣ ವೇಷಧಾರಿಗಳಾಗಿದ್ದಾರೆ. ಮಲಗಿಕೊಳ್ಳಲು ಬಂದರಕಿ ಸೊಪ್ಪಿನ ಹಾಸಿಗೆ 'ಬಂದ್ರತೊಡಕ' ನಿರ್ಮಿಸಿಕೊಂಡು ಹೊದೆಯಲು ಕರಿ ಕಂಬಳಿ ಬಳಸುತ್ತಾರೆ. ಕಿಲಾರಿಗಳು ಹಟ್ಟಿಗಳಿಗೆ ಹೋಗಿ ಅಕ್ಕಿ ಪಡೆದುಕೊಂಡು ತಂದು (ಹಟ್ಟಿಗಳ ಜೊತೆಗೆ ಇವರನ್ನು ಗೌರವದಿಂದ ನೋಡಿಕೊಳ್ಳುತ್ತಾರೆ) ಜೀವನ ನಿರ್ವಹಿಸುತ್ತಾರೆ.[೨]

ಮ್ಯಾಸ ಮಂಡಲವು ಎತ್ತೈಗಳ ಹಟ್ಟಿಯನ್ನು ಪುಣ್ಯಕ್ಷೇತ್ರವೆಂದು ಭಾವಿಸಿದ್ದಾರೆ. ವಿಶೇಷವಾಗಿ

ಶ್ರಾವಣ ಮಾಸದಲ್ಲಿ ಹೊಸದಾಗಿ ಮದುವೆಯಾದ ನವ ದಂಪತಿಗಳು ಇಲ್ಲಿ ಬಂದು ಮಲಗುತ್ತಾರೆ. ಎತ್ತುಗಳು ರಾತ್ರಿ ವೇಳೆ ಮಲಗಲು ಮಾಡಿರುವ ಹಟ್ಟಿಗಳನ್ನು ಮುತ್ತಯ್ಯಗಳ ನಿಧಿ ಎನ್ನುತ್ತಾರೆ. ಮ್ಯಾಸಬೇಡರಲ್ಲಿ ಪಶುಗಳು ಮಲಗುವ ಹಟ್ಟಿಯನ್ನು ಸಾಕ್ಷಾತ್ ದೇವಸ್ಥಾನವೆಂದೇ ಭಾವಿಸಲಾಗುತ್ತದೆ. ಕಷ್ಟ ಕಾರ್ಪಣ್ಯ ಇರುವ ಜನ ಒಂದು ದೇವ ಗಂಪಳ (ದೇವರಿಗೆ ಬಿಟ್ಟ ದನಗಳ ಗುಂಪು) ಎಂದು ಭಾವಿಸಿದ ಈ ಮುತ್ತಯ್ಯಗಳ ನಿಧಿಯಲ್ಲಿ ರಾತ್ರಿ ದೇವರುಗಳು ಎತ್ತುಗಳೊಂದಿಗೆ ಮಲಗುತ್ತಾರೆ. ಇಂದಿಗೂ ಸಹ ಈ ಸಂಸ್ಥಾನದಲ್ಲಿ ಈ ಆಚರಣೆಗಳು ಕಂಡು ಬರುತ್ತವೆ.

ಸುಮಾರು ಹದಿನಾರು, ಹದಿನೇಳು ವರ್ಷ ವಯಸ್ಸಿಗೆ ಬಂದ ಹುಡುಗನು ಕಿಲಾರಿಯಾಗಲು ಅರ್ಹನಿರುತ್ತಾನೆ. ಕಿಲಾರಿಯಾಗಲು ದೇವರ ಪೂಜಾರಿಯಿಂದ ದೀಕ್ಷೆ ಪಡೆದ ನಂತರವೇ ಕಿಲಾರಿಯಾಗಲು ಅವಕಾಶವಿದೆ. ಎತ್ತಿನ ಕಿಲಾರಿಯಾಗಿ ದೀಕ್ಷೆ ಪಡೆಯಲು ಗುರುಸ್ಥಾನದ ಮೂವರು ಬರಬೇಕು. ಕಿಲಾರಿಯಾಗುವ ಹುಡುಗ ಗುರುಸ್ಥಾನದವರ ಮುಂದೆ ನಿಂತರೆ ಅವರು ಸಾಪಿರದ ಒಪ್ಪಿಗೆಯಂತೆ ನೀನು ಎತ್ತು ಕಾಯುವ ಕಿಲಾರಿಯಾಗಲು ಒಪ್ಪಿರುವೆಯೋ ಎಂದು ಆ ಹುಡುಗನನ್ನು ಕೇಳುವರು. ಆತ ಒಪ್ಪಿಗೆಯಿದೆ ಎಂದು ತಿಳಿಸಿದ ನಂತರ ಅವನಿಗೆ ಸ್ನಾನ ಮಾಡಿಸಿ ಉಡುಪು ಕೊಡುತ್ತಾರೆ. ಉಡುಪು ಎಂದರೆ ಚಲ್ಲಣ, ಹಚ್ಚಡಿ, ಕೈಕೋಲು, ಕಂಬಳಿ, ಕೋರಿಗೆ ಅಂದಿನಿಂದ ಅವನು ದೇಶದ ಮಧ್ಯೆ ಬೆತ್ತ ಎತ್ತಿಕೊಂಡು ದೇವರೆತ್ತುಗಳನ್ನು ಕಾಯ್ದು ಕೊಂಡು ಕಾಲಹರಣ ಮಾಡಬೇಕೆಂದು ಗುರುಸ್ಥಾನದವರು ಹೇಳಿಕೊಡುವರು.[೨]

ಮ್ಯಾಸ ಮಂಡಲವು ಎತ್ತೈಗಳ ಹಟ್ಟಿಯನ್ನು ಪುಣ್ಯಕ್ಷೇತ್ರವೆಂದು ಭಾವಿಸುತ್ತಾರೆ. ಸಾಮಾಜಿಕ ನ್ಯಾಯ ನಿರ್ಣಯದಲ್ಲಿ ಶಿಕ್ಷೆಗೆ ಒಳಗಾದವರೂ ಇಲ್ಲಿಗೆ ಆಗಮಿಸಿ 'ಶುದ್ಧ'ವಾಗಿ ಹೋಗುತ್ತಾರೆ. ಈ ಎಲ್ಲಾ ಹಿನ್ನೆಲೆಯಲ್ಲಿ ಎತ್ತೈಗಳ ಹಟ್ಟಿಯ ಮ್ಯಾಸನಾಯಕರಲ್ಲಿ ಉನ್ನತವಾದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕೇಂದ್ರವಾಗಿದೆ.

ಭಕ್ತರ ರೊಟ್ಟಿಗಳನ್ನು ಮಾಡಿಕೊಂಡು ದೇವರೆತ್ತುಗಳಿಗೆ ತಿನಿಸುತ್ತಾರೆ. ಕಿಲಾರಿಗಳಿಗೆ ಭತ್ಯವು ದವಸ ಅಕ್ಕಿ, ಹಿಟ್ಟು, ಎಲೆ ಅಡಿಕೆ ಹಣ್ಣುಗಳನ್ನು ಕಿಲಾರಿಗಳು ಹಾಸಿದ ಗದ್ದಿಗೆಯಲ್ಲಿ ತಂದು ಹಾಕುತ್ತಾರೆ. ಕಿಲಾರಿಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದ ಪಡೆದು ಹಿಂದಿರುಗುತ್ತಾರೆ. ಭಕ್ತರಿಂದ ಬಂದಂತಹ ದವಸ ಧಾನ್ಯಗಳನ್ನು ಕಿಲಾರಿಗಳು ಬೇಸಿಗೆ ಅಥವಾ ಮಳೆಗಾಲಕ್ಕೆಂದು ಮಡಕೆಗಳನ್ನು ದಾಸ್ತಾನು ಮಾಡುವರು. ಈ ದಾನ್ಯಗಳನ್ನು ಶೇಖರಿಸಿಡಲು ಮತ್ತು ಅಡಿಗೆ ಮಾಡಲು ಹಾಲು ಮಜ್ಜಿಗೆ ಶೇಖರಿಸಲು ಮಡಿಕೆ ಇರಿಸಲು ಎತ್ತಿನ ಆ ಗೂಡಿನೊಳಗೆ ಒಂದು ಸಣ್ಣ ಗುಡಿಸಲು ಕಟ್ಟಿರುತ್ತಾರೆ. ಇದರಲ್ಲಿ ಕಿಲಾರಿಗಳು ದವಸ ಧಾನ್ಯಗಳನ್ನು ಸಂಗ್ರಹಿಸಿಡುತ್ತಾರೆ.[೩]

ಮ್ಯಾಸಬೇಡರಲ್ಲಿ ದೇವರೆತ್ತುಗಳ ಆಗಮನವಾಗದೇ ಯಾವ ಕಾರ್ಯಗಳು ನಡೆಯುವುದಿಲ್ಲ

ಪ್ರತಿಯೊಂದು ಕಾರ್ಯಕ್ಕೆ ಇವು ಇರಲೇಬೇಕು. ದೇವರೆತ್ತುಗಳು ಇಂದು ಕಂಡು ಬರುವ ಸ್ಥಳಗಳು ಈ ಕೆಳಗಿನಂತಿವೆ.

(ಕಾನನದಲ್ಲಿ) ಕಾಡಿನಲ್ಲಿ

೧. ದೇವರೆತ್ತುಗಳು ಮೊಳಕಾಲ್ಮೂರು ತಾಲೂಕಿನ ಬಿ.ಜಿ ಕೆರೆ ಕಮರದ('ಕಾನಿನಲ್ಲಿ) ೫೦ ಎತ್ತುಗಳಿವೆ.

೨. ಕೂಡ್ಲಿಗಿ ತಾಲೂಕು ಗುಡೆಕೋಟೆ ಅಪ್ಪೇನಹಳ್ಳಿ ಸರಹದ್ದಿನ ಅಡವಿಯಲ್ಲಿ ೬೦ ಎತ್ತುಗಳಿವೆ.

೩. ಚಿಕ್ಕ ಕುಮತಿ ಕಂಪಳದೇವರ ಹಟ್ಟಿ ಹತ್ತಿರದ ಕಮರದ ಕಾಡಿನಲ್ಲಿ ಪಾಪನಾಯಕನ ಎತ್ತುಗಳೆಂದು ಸುಮಾರು ೫೦ ಎತ್ತುಗಳಿವೆ.

೪. ಬೋಸೆ ದೇವರು ಹಟ್ಟಿಯಲ್ಲಿ ೩೦ ದೇವರೆತ್ತುಗಳಿವೆ.

೫. ಮಲ್ಲೂರಹಳ್ಳಿಯ ಕಾನನದಲ್ಲಿ ೪೦ ಎತ್ತುಗಳಿವೆ.

೬. ಪದ್ದಿನಾನದೇವರಹಟ್ಟಿಯಲ್ಲಿ ೩೦ ಎತ್ತಗಳಿವೆ.

**ದಾಸಯ್ಯಗಳು**

ದಾಸಯ್ಯಗಳು ಪಾತ್ರ ಬಹು ಮುಖ್ಯವಾದದ್ದು. ಹಬ್ಬ ಹರಿದಿನ, ಮದುವೆ, ಮಂಗಲ ಕಾರ್ಯ ಗೃಹಪ್ರವೇಶ, ಮಕ್ಕಳ ನಾಮಕರಣ ಮುಂತಾದ ಶುಭ ಕಾರ್ಯಗಳಲ್ಲಿ ಮ್ಯಾಸ ಬೇಡರು ತಮ್ಮ ಕುಲದವರಿಗೆ ಸಂಬಂಧಪಟ್ಟ ತಮ್ಮ ಜನಾಂಗದವರೇ ಆದ ದಾಸಯ್ಯಗಳಿಗೆ ವಿಶೇಷವಾಗಿ ಆಹ್ವಾನ ನೀಡುತ್ತಾರೆ. ತಮ್ಮ ಸಮುದಾಯದವರು ಬಂದು ಕರೆದಾಗ ದಾಸಯ್ಯ ಹೋಗಿ ಶಂಖ ಊದಿ 'ಜಾಗಟೆ' ಬಡಿದು ಭಗವಂತನ ನಾಮ ಸ್ಮರಣೆ ಮಾಡುತ್ತಾ "ಲಕ್ಷ್ಮೀರಮಣ ಗೋವಿಂದಾ ಗೋವಿಂದ" ಎಂದು ಮಂತ್ರ ಹೇಳುತ್ತಾ ದೇವರನ್ನು ಕೊಂಡಾಡಿ ದಕ್ಷಿಣೆ ಪ್ರಸಾದ ಸ್ವೀಕರಿಸಿ ಬರುತ್ತಾರೆ.

ದಾಸಯ್ಯನಿಗೆ ಮುದ್ರೆ ಒತ್ತುವಾಗ ದೇವರ ಸನ್ನಿದಿಯಲ್ಲಿ ಕರಿಕಂಬಳಿ ಹಾಸಿ, ಕಳಸ ಹೂಡಿ, ಕಂಕಣ ಕಟ್ಟಿ ಪಂಚೆ ಉಡಿಸಿ ಹಣೆಯ ಮೇಲೆ ಮೂರು ನಾಮಗಳನ್ನಿಟ್ಟು ಗದ್ದುಗೆಯ ಮೇಲೆ ಕುಳ್ಳಿರಿಸುತ್ತಾರೆ. ಅಕ್ಕಸಾಲಿಗರು ತಯಾರಿಸಿದ ಪಂಚಲೋಹದ ಸುಮಾರು ನಾಲ್ಕು ಇಂಚು ಉದ್ದ ಒಂದುವರೆ ಇಂಚು ಅಗಲದ ಎರಡು ಶಂಖ-ಚಕ್ರಗಳನ್ನು ಬೆಂಕಿಯಲ್ಲಿ ಕಾಯಿಸಿ ದಾಸಯ್ಯನ ಎಡ ಬಲ ಭುಜಗಳ ಮೇಲೆ ದೇವರ ಪೂಜಾರಿ ಮುದ್ರೆ ಒತ್ತುತ್ತಾನೆ. ದಾಸಯ್ಯ ಮರಣ ಹೊಂದಿದಾಗ ಶಾಸ್ತ್ರೋಕ್ತವಾಗಿ ಪೂಜಾರಿ, ದಾಸಯ್ಯ ಗುರು ಹಿರಿಯರ ಸಮ್ಮುಖದಲ್ಲಿ ತುಳಸಿ ಮಣಿಯನ್ನು ತೆಗೆಯುತ್ತಾರೆ. ಇದಕ್ಕೆ 'ಪಟ್ಟ ಇಳಿಸುವುದು, ಎನ್ನುತ್ತಾರೆ. ನಂತರ ದಾಸಯ್ಯನ ಶವ ಸಂಸ್ಕಾರ ಮಾಡುತ್ತಾರೆ. ಅವಿವಾಹಿತ ದಾಸಯ್ಯ ಮರಣ ಹೊಂದಿದರೂ ಕೂಡಾ ವಿವಾಹಿತ ರಂತೆ ಎಲ್ಲಾ ರೀತಿಯ ತಿಥಿ ಕರ್ಮಗಳನ್ನು ಮಾಡುತ್ತಾರೆ.

## ನಾಯಕನಹಟ್ಟಿ ತಿಪ್ಪೇಸ್ವಾಮಿ

ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರಗಳಲ್ಲಿ ನಾಯಕನಹಟ್ಟಿಯ ವೀರ ಅವಧೂತ ಶ್ರೀ ತಿಪ್ಪೇಸ್ವಾಮಿಯ ಜಾತ್ರೆ ಕರ್ನಾಟಕದ ಜಾತ್ರೆಗಳಲ್ಲಿ ವಿಶಿಷ್ಟವಾದುದು. ಬುಡಕಟ್ಟು ಸಮುದಾಯ ಜಾತ್ರೆಗಳಲ್ಲಿ ಮೈಲಾರ ಜಾತ್ರೆಯೇ ಕರ್ನಾಟಕ ಜಾತ್ರೆಗಳಲ್ಲಿ ಎಲ್ಲಾ ದೃಷ್ಟಿಯಿಂದಲೂ ಬೃಹತ್ ಜಾತ್ರೆ. ಈ ಜಾತ್ರೆಯನ್ನು ಬಿಟ್ಟರೆ ಬುಡಕಟ್ಟು ಹಾಗೂ ಶಿಷ್ಟ ಸಂಸ್ಕೃತಿಗಳ ಸಮನ್ವಯ ಪ್ರತೀಕವಾದ ನಾಯಕನಹಟ್ಟಿ ತಿಪ್ಪೇಸ್ವಾಮಿ ಜಾತ್ರೆಯೇ ಕರ್ನಾಟಕದ ಬಹು ದೊಡ್ಡ ಜಾತ್ರೆ., ಜಾತಿ, ಮತ, ಭೇದ ಭಾವವಿಲ್ಲದೇ ಹಿಂದೂ-ಮುಸ್ಲಿಂ ಎಂಬ ತಾರತಮ್ಯವಿಲ್ಲದ ಕರ್ನಾಟಕದ ಎಲ್ಲಾ ಜನರು ಸೇರುವದು ಈ ಜಾತ್ರೆಯು ಮತ್ತೊಂದು ವಿಶೇಷ.

ಈ ಜಾತ್ರೆಯು ಇಲ್ಲಿನ ಬುಡಕಟ್ಟು ಸಂಸ್ಕೃತಿಯನ್ನು ವೈಭವಿಸಿಕೊಂಡು ಅದರ ಮೂಲಕವೇ ಎಲ್ಲರನ್ನು ಆಕರ್ಷಿಸುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ನಡೆಯುವ ಅನೇಕ ಜಾತ್ರೆಗಳಲ್ಲಿ ಪ್ರಮುಖವಾದ ಜಾತ್ರೆಗಳೆಂದರೆ ಮ್ಯಾಸ ಬೇಡ ಬುಡಕಟ್ಟಿನ ಸಂಸ್ಕೃತಿಯ ದಟ್ಟ ಪ್ರಭಾವವಿರುವ ಗೌರಸಂದ್ರದ ಮಾರಮ್ಮನ ಜಾತ್ರೆ. ಹಾಗೂ ನಾಯಕನಹಟ್ಟಿಯ ತಿಪ್ಪೇಸ್ವಾಮಿಯ ಜಾತ್ರೆಗಳು ಪ್ರಮುಖವಾದುವು.

ಚಿತ್ರದುರ್ಗ ಜಿಲ್ಲೆಯಲ್ಲಿ ಮ್ಯಾಸಬೇಡರು ಕಾಡುಗೊಲ್ಲರು ಹಾಗೂ ಲಂಬಾಣಿಗರು ಕಂಡು ಬರುತ್ತಾರೆ. ಮ್ಯಾಸನಾಯಕರ ಹಾಗೂ ಕಾಡುಗೊಲ್ಲರ ಬೇಟೆ-ಪಶುಪಾಲನೆ ಸಂಸ್ಕೃತಿಗಳ ಜಾತ್ರಗಳ ಆಚರಣೆಗಳಲ್ಲಿ ಮೂಲ ದ್ರವ್ಯವಾಗಿವೆ. ಅನಂತರ ಕೃಷಿ ಸಂಸ್ಕೃತಿಯ ವಿಶೇಷಗಳು ಸೇರಿಕೊಂಡಿವೆ. ನಾಯಕನಹಟ್ಟಿ ಜಾತ್ರೆಯಲ್ಲಿ ನಾವು ಈ ಸಂಸ್ಕೃತಿಗಳ ಮಾರ್ಗದರ್ಶನ ಅಗತ್ಯವಿತ್ತು. ಈ ಸಂಸ್ಕೃತಿಗಳ ಸಮ್ಮಿಲನವನ್ನು ಅಲ್ಲಿ ನಡೆಯುವ ಆಚರಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಗಮನಿಸಬಹುದು. ಸುಮಾರು ೨೫೦ ವರ್ಷಗಳ ಹಿಂದೆ ಜೀವಿಸಿದ್ದ ಶ್ರಮ ಸಂಸ್ಕೃತಿಯ ಪ್ರತೀಕವೆನಿಸಿದ್ದ ತಿಪ್ಪೇಸ್ವಾಮಿ ಎಂಬ ಅವಧೂತ ಇಲ್ಲಿಯ ಬುಡಕಟ್ಟು ಜನರ ಬೇಟೆ ಹಾಗೂ ಪಶುಪಾಲನೆ ಬಿಟ್ಟರೆ ಉಳಿದ ಯಾವುದೇ ವೃತ್ತಿಗಳ ಬಗ್ಗೆ ಅಪರಿಚಿತರೇ ಆಗಿದ್ದರು.[೪]

ಚಳ್ಳಕೆರೆಯಿಂದ ನಾಯಕನಹಟ್ಟಿಗೆ ಹೋಗುವ ಮಾರ್ಗದಲ್ಲಿ ಬರುವ ಕಟ್ಟೆ, ಕೆರೆಗಳು, ಹಸು-ಎತ್ತುಗಳಿಗೆ ನೀರು ಕುಡಿಯುವ ಸಲುವಾಗಿಯೇ ರೂಪಿತವಾಗಿರುವುದನ್ನು ಕಾಣಬಹುದು. ನೇರ್ಲಗೊಂಟ್ಟೆಯ ಸುತ್ತ ಮುತ್ತಲಿನ ಕಿಲಾರಿಗಳ ಹೆಸರಿನಲ್ಲಿಯೇ ಕಟ್ಟೆಗಳಿಗೆ ಹೆಸರಿರುವದನ್ನು ಗಮನಿಸಬೇಕಾದ ಅಂಶವಾಗಿದೆ. ಪಶುಪಾಲನೆ ಸಂಸ್ಕೃತಿ ಹೆಜ್ಜೆ ಗುರುತುಗಳೆ ಇಲ್ಲಿಯ ಬುಡಕಟ್ಟು ಜನರ ಇತಿಹಾಸವನ್ನು ಅವರ ಜೀವನಕ್ರಮವನ್ನು ವಿವರಿಸುತ್ತದೆ. ಎತ್ತುಗಳ ಪಾಲನೆ ಪೋಷಣೆಗಳ ಬಗ್ಗೆ ಈ ಬುಡಕಟ್ಟು ಜನ ಪರಿಣಿತರಾಗಿದ್ದು ನಂತರ ವ್ಯವಸಾಯ ವೃತ್ತಿಯ ಜೀವನವನ್ನು ಒಪ್ಪಿಕೊಳ್ಳಬೇಕಾದ ಅವರ ಸಂದಿಗ್ದತೆಯನ್ನು ಅವರ ಜೀವನ ಕ್ರಮಕ್ಕೆ ಕೈಗೊಳ್ಳಲು ಕಠಿಣ ಶ್ರಮಪಡಬೇಕಾಯಿತು.

ಈ ಸಂದಿಗ್ಧ ಸಮಯದಲ್ಲಿ ತಿಪ್ಪೇಸ್ವಾಮಿ ಆಗಮನವಾಯಿತು. ಪಶುಪಾಲನೆಯಿಂದ ಕೃಷಿ ಪ್ರಧಾನ ಜೀವನಕ್ಕೆ ಹೊರಳುವ ಸಮಯದಲ್ಲಿ ಗುರು ಅಥವಾ ಮಾರ್ಗದರ್ಶಕನ ಅಗತ್ಯವಿತ್ತು. ತಿಪ್ಪೇಸ್ವಾಮಿಯವರು ಇವರ ಜೀವನಕ್ಕೆ ಮಾರ್ಗದರ್ಶಕರಾಗಿ, ಗುರುವಾಗಿ, ಅನಾಥರಾಗಿದ್ದ ಮ್ಯಾಸಬೇಡ ಬುಡಕಟ್ಟು ಸಮುದಾಯ ಜನರ ಜೀವನಕ್ಕೆ ಆಶಾಜ್ಯೋತಿಯಾಗಿ ಕಾಣಿಸಿಕೊಂಡರು.

ತಿಪ್ಪೇಸ್ವಾಮಿಯವರು ಈ ಜನರ ಬೆಂಬಲ ಹಾಗೂ ಅವರ ಶ್ರಮದಿಂದ ವ್ಯವಸಾಯಕ್ಕೆ ಬೇಕಾದ ಕೆರೆಗಳನ್ನು ಕಟ್ಟಲು ಮಾರ್ಗದರ್ಶನ ನೀಡಿದರು. ತಿಪ್ಪೇಸ್ವಾಮಿ ಕಟ್ಟಿಸಿದ ಕೆರೆಗಳೆಂದರೆ ದೊಡ್ಡಕೆರೆ, ಚಿಕ್ಕಕೆರೆ. ಅಲ್ಲದೇ ರಾಮಸಾಗರದ ಹತ್ತಿರ ಒಂದು ಕೆರೆಯನ್ನು ಅವರು ಕಟ್ಟಿಸಿದ್ದಾರೆ. ಈ ಕೆರೆಗಳ ನೀರನ್ನು ಕೃಷಿಗಾಗಿ ಇಂದು ಸಹ ಬಳಸುವುದು ಕಂಡು ಬರುತ್ತದೆ. ಈ ಕೆರೆಗಳ ನಿರ್ಮಾಣದಿಂದ ಇಲ್ಲಿನ ಜನತೆಗೆ ಕೃಷಿಗೆ ಬಹಳ ಅನುಕೂಲ ವಾಗಿದೆ. ತಿಪ್ಪೇಸ್ವಾಮಿ ಉದಾರ ಮಾನವತಾ ಗುಣ ಹೊಂದಿದವರಾಗಿದ್ದರು. ಕೆರೆ ಕಟ್ಟುವಾಗ ಕೂಲಿಗಾಗಿಆಗಮಿಸಿದ ಗರ್ಭಿಣಿಯರಿಗೆ ಒಂದು ಕೂಲಿ ಹಣವನ್ನು ಹೆಚ್ಚಾಗಿ ನೀಡುತ್ತಿದ್ದುದು ಸಾಕ್ಷಿಯಾಗಿದೆ. ತಿಪ್ಪೇಸ್ವಾಮಿಯ ಬಗೆಗೆ ಯಾವುದೇ ನಿರ್ದಿಷ್ಟ ಐತಿಹಾಸಿಕ ದಾಖಲೆಗಳಿಲ್ಲ. ನಾಯಕನಹಟ್ಟಿಯ ವೈಕರಿನಲ್ಲಿ ಶರಣನೆಂಬ ಉಲ್ಲೇಖವಿದೆ.

**ನಾಯಕನಹಟ್ಟಿಯಲ್ಲಿ ಒಳಮಠ – ಹೊರಮಠ**

ನಾಯಕನಹಟ್ಟಿಯಲ್ಲಿ ಒಳಮಠ– ಹೊರಮಠ. ಎಂಬ ಎರಡು ಪ್ರಬೇದಗಳನ್ನು ನಾವು ಕಾಣುತ್ತೇವೆ. ಈ ಪ್ರಬೇದಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಶಿಷ್ಟ ಹಾಗೂ ಬುಡಕಟ್ಟಿನ ಸಂಸ್ಕೃತಿ ಪ್ರಧಾನವಾದ ಹೊರಮಠದಲ್ಲಿ ಶಿಷ್ಟಸಂಸ್ಕೃತಿಯು ಕಂಡು ಬರುತ್ತದೆ.

**ಒಳಮಠ**

ಒಳಮಠವೆಂದು ಕರೆಯುವ ತಿಪ್ಪೇಸ್ವಾಮಿ ದೇವಾಲಯದಲ್ಲಿ ವಾಸ್ತವವಾಗಿ ಹಿಂದೆ ಅದೊಂದು ಮಾರಿಗುಡಿ, ತಿಪ್ಪೇಸ್ವಾಮಿ ಮಾರಿಗುಡಿಯನ್ನು ಪ್ರವೇಶಿಸಿದ ಜನರ ಮೂಢ ನಂಬಿಕೆಗಳನ್ನು ಪ್ರಾಯೋಗಿಕವಾಗಿ ಹೋಗಲಾಡಿಸಿದರ ಸಂಕೇತವಾಗಿದೆ. ಮಾರಿಯನ್ನು ಹೊರದೂಡಿ (ಮೂಡನಂಬಿಕೆಯನ್ನು) ತಾನೇ ಅಲ್ಲಿ ವಾಸಿಸಿದ ಸ್ಥಳವೇ ಈಗಿನ ತಿಪ್ಪೇಸ್ವಾಮಿ ದೇವಸ್ಥಾನ. ಪ್ರಾರಂಭದಲ್ಲಿ ಇಲ್ಲಿ ಗೋಪುವಿರಲಿಲ್ಲ. ಬಸೆಟ್ಟಿಪ್ಪನೆಂಬ ಭಕ್ತನೊಬ್ಬ ಈಗ ಕಾಣುವ ಸುಮಾರು ೨೪ ಮೀಟರ್ ಎತ್ತರದ ಗೋಪುರವನ್ನು ಕಟ್ಟಿಸಿದ್ದು ದಾಖಲೆಗಳಿಂದ ತಿಳಿದು ಬರುತ್ತದೆ. ಈ ಗೋಪುರವು ಅನೇಕ ಪೌರಾಣಿಕ ಚಿತ್ರಗಳನ್ನು ಒಳಗೊಂಡಿದೆ.

**ಹೊರಮಠ**

ತಿಪ್ಪೇಸ್ವಾಮಿಯ ಸಮಾಧಿ ಇರುವ ಗುಡಿಯೇ ಹೊರಮಠ. ಹೊರ ನೋಟಕ್ಕೆ ಅಲ್ಲಿಯ ವಾಸ್ತುಶಿಲ್ಪ ಗಮನಿಸಿದರೆ ಹಿಂದೂ–ಮುಸ್ಲಿಂ ಐಕ್ಯತೆಯ ಪ್ರತೀಕದಂತಿದೆ. ಹೈದರಾಲಿಯೇ ಇದನ್ನು ಕಟ್ಟಿಸಿದ್ದ ಎಂಬ ಪ್ರತೀತಿ ಇದೆ. ಮುಸ್ಲಿಂ ವಾಸ್ತುಶಿಲ್ಪದ ಈ ಕಟ್ಟಡ ಹಿಂದೂ ಸಂತಾನನೊಬ್ಬನದು ಎಂದರೆ ತಿಪ್ಪೇಸ್ವಾಮಿ ಆಗಿನ ಮುಸ್ಲಿಂರು (ಈಗಲೂ ಹಲವು ಮುಸ್ಲಿಂರು) ತಮ್ಮದೆಂದು ಭಕ್ತಿ ಶ್ರದ್ಧೆ ಯಿಂದ ಕಂಡಿದ್ದರು ಎನ್ನುವುದಕ್ಕೆ ಇದು ಸಾಕ್ಷಿಯಾಗಿದೆ. ಇಲ್ಲಿಂದಲೇ ಒಳಮಠದ ತಿಪ್ಪೇಸ್ವಾಮಿಯ ದೇವಾಲಯಕ್ಕೆ ಜೀವಕಳೆ ಹೋಗಬೇಕಾಗಿರುವುದರಿಂದ ಇದಕ್ಕೆ ಮಹತ್ವದ ಸ್ಥಾನವಿದೆ.

ಇಲ್ಲಿಯ ಆಚರಣೆಗಳಲ್ಲಿ ಬುಡಕಟ್ಟು ಸಂಸ್ಕೃತಿಯ ಪ್ರಭಾವ ದಟ್ಟವಾಗಿ ಬೀರಿರುವುದನ್ನು ಕಾಣುತ್ತೇವೆ. ಇಲ್ಲಿ ಗುಗ್ಗರಿ ಹಬ್ಬಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಈ ಗುಗ್ಗರಿ ಹಬ್ಬ ಇಲ್ಲಿಯ ಬುಡಕಟ್ಟು ಸಂಸ್ಕೃತಿಯ ಬಹು ದೊಡ್ಡ ಹಬ್ಬ. ಬೇಟೆ, ಪಶುಪಾಲನೆ, ಕೃಷಿ ಸಂಸ್ಕೃತಿಗಳ ಪರಸ್ಪರ ಮಿಲನವನ್ನು ಈ ಹಬ್ಬದ ಆಚರಣೆಯಲ್ಲಿ ಕಾಣಬಹುದು.

ಒಳಮಠದ ವ್ಯವಸ್ಥೆ ಹಳ್ಳಿಯ ಸಂಸ್ಕೃತಿಯ ಶಿಷ್ಟರೂಪದ್ದು. ಹಟ್ಟಿ ಹಳ್ಳಿಯಾದಾಗ ಈ ರೀತಿಯ ಮಾರ್ಪಾಡು ಆಗುವುದು ಎಲ್ಲಾ ಊರಿನ ಜಾತ್ರೆಯ ಲಕ್ಷಣವು ಹೌದು. ಜಾತಿ ವ್ಯವಸ್ಥೆಯ ಪ್ರತೀಕವೇ ಈ ರಥೋತ್ಸವದಲ್ಲಿ ಕಾಣುತ್ತದೆ. ಹಳ್ಳಿಯ ಎಲ್ಲರ ಸಹಕಾರವು ಇರುವುದರಿಂದ ಸಮಾಜದ ಎಲ್ಲಾ ವರ್ಗದ ಜನರಿಗೂ ಪ್ರತ್ಯೇಕ ಅಸ್ಥಿತ್ವ ಇರುತ್ತದೆ. ಸಮನ್ವಯತೆ ಐಕ್ಯತೆ ಸಾಧಿತವಾದಂತೆ ಕಂಡರೂ ಸೂಕ್ಷ್ಮವಾಗಿ ನೋಡಿದರೆ ಅವರ ಸ್ಥಾನಮಾನಗಳು ನಿರ್ದಿಷ್ಟವಾಗಿರುವು ದರಿಂದ ಈ ಪ್ರಕ್ರೀಯೆ ಜಾತಿ ವ್ಯವಸ್ಥೆಗಳಿಗೆ ಹಿಡಿದ ಕನ್ನಡಿಯೇ ಆಗಿದೆ. ಒಳಮಠದ ಆವರಣದಲ್ಲಿ ಶಿಷ್ಟ ಸಂಸ್ಕೃತಿಗೆ ಪ್ರಧಾನತೆ ಇರುವುದರಿಂದ ಸಸ್ಯಾ ಆಹಾರಕ್ಕೆ ಪ್ರಾಮುಖ್ಯತೆ ಇರುತ್ತದೆ. ದೂರದಿಂದ ಬಂದ ಭಕ್ತರು ಅಲ್ಲಲ್ಲಿ ಬಿಡಾರ ಹೂಡಿ ಸಿಹಿ ಊಟ ಸಿದ್ದಪಡಿಸಿ ತಿಪ್ಪೇಸ್ವಾಮಿಯ ಭಾವ ಚಿತ್ರವನ್ನು ಸ್ಥಾಪಿಸಿ, ಆರಾಧನೆ ಮಾಡಿ ಒಟ್ಟಿಗೆ ಭೋಜನ ಮಾಡುವ ದೃಶ್ಯಗಳನ್ನು ಕಾಣಬಹುದು. ಇಲ್ಲಿ ಭಜನೆ ಭಕ್ತಿಗೀತೆಗಳು ಪ್ರಮುಖವಾಗಿ ಕೇಳಿಸುತ್ತವೆ. ಇಲ್ಲಿ ಅವಧೂತರ ಭಂಗಿ ಸೊಪ್ಪಿನ ಅಬ್ಬರ ಇರುವುದಿಲ್ಲ. ಮಾಂಸದ ಅಡುಗೆಯ ಸಡಗರವು ಇರುವುದಿಲ್ಲ.

ಹೊರಮಠದಲ್ಲಿ ಮಾಂಸದ ಅಬ್ಬರ. ಸನ್ಯಾಸಿಗಳ ಭಂಗಿಯ ಜಂಗಿಗಳನ್ನು ಕಾಣಬಹುದು. ಹೀಗೆ ಒಂದು ಜಾತ್ರೆಯಲ್ಲಿ ಸೀಳಿ ಹೋದ ಶಿಷ್ಠ ಜನರ ಸಂಸ್ಕೃತಿಗಳ ಆಚರಣೆಗಳು ನಿರ್ದಿಷ್ಟ ಪ್ರದೇಶಗಳಲ್ಲಿ ನಡೆಯುವುದು ಸಾಂಸ್ಕೃತಿಕ ಸಂಘರ್ಷಗಳಲ್ಲಿ ಹಿಡಿದ ಕನ್ನಡಿಯಂತಿದೆ. ಒಳಮಠ ಹೊರಮಠ ಎಂದು ಕರೆದಿರುವ ವಿಂಗಡಣೆ ಶಿಷ್ಟ ಸಂಸ್ಕೃತಿಯದೇ ಆಗಿದೆ. ಒಳಮಠ–ಹೊರಮಠ ಈ ಸಂಘರ್ಷವು ನಮ್ಮ ದೇಶದ ಎಲ್ಲಾ ಪ್ರದೇಶಗಳಲ್ಲಿರುವ ಸಂಘರ್ಷವೇ ಆಗಿದೆ. ಒಳಹೊರ ಹೋಗಿ ಒಂದಾಗುವ ಪ್ರಕ್ರಿಯೆಗೆ ಮತ್ತೊಬ್ಬ ತಿಪ್ಪೇಸ್ವಾಮಿಯಂಥ ಅವಧೂತನೆ ಬರಬೇಕಾಗಿದೆ.

### ದಡ್ಡಿ ಸೂರನಾಯಕ

ಹಿರೇಹಳ್ಳಿ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕ ಗರಣಿ ಹಳ್ಳದ ಸಮೀಪದಲ್ಲಿ ಚಳ್ಳಕೆರೆ (ಬಳ್ಳಾರಿ ರಸ್ತೆ) ಈ ಗ್ರಾಮದಲ್ಲಿ ಇಲ್ಲಿ ಬಹುಸಂಖ್ಯಾತರ ನಾಯಕರು ಸಣ್ಣ ಬೆಟ್ಟ ಗುಡ್ಡಗಳ ಸಾಲು, ದಿನ್ನೆಗಳಲ್ಲದೆ ಆಂಧ್ರದ ಗಡಿ ಈ ಊರಿಗೆ ಸಮೀಪದಲ್ಲಿದೆ. ತೆಲುಗಿನಲ್ಲಿ ಪೆದ್ದಪಲ್ಲಿ ಎಂಬ ಹೆಸರಿದೆ. ಹಿರಿಯರು ಕೂಡಿ ನಿರ್ಮಿಸಿದ ಹಳ್ಳಿ ಎಂದು ಹೇಳಲಾಗುತ್ತಿದೆ. ಇಲ್ಲಿನ ಪ್ರಸಿದ್ದ ಹಾಗೂ ಮೂಲ ದೇವರು ದಡ್ಡಿ ಸೂರನಾಯಕ ಇವನು ಮ್ಯಾಸಬೇಡರಲ್ಲಿಯ ಒಬ್ಬ ಪಶುಪಾಲಕ. ಬೇಡ ಕಾಪು, ಕಂಪಳದೊಂದಿಗೆ

ಮೊಳಕಾಲ್ಮೂರು ರಾಯದುರ್ಗದ ಗಲಗಲ್ಲು ಪ್ರದೇಶದಲ್ಲಿ ನೆಲೆಸಿರುವಾಗ ಗಲಗಲ್ಲು ಗಾಜನಾಯಕನ ಪತ್ನಿಗೆ ಮನ ಸೋತಿರುತ್ತಾನೆ. ಒಮ್ಮೆ ಕುರಿ ಮಂದೆಯಲ್ಲಿ ವಾಸ್ತವ ಹೂಡಿದಾಗ ಕರಿಬಣ್ಣದ ಸೀರೆಯನ್ನುಟ್ಟು ಬಂದ ತನ್ನ ಪ್ರೇಯಸಿಯನ್ನು ಕಾಡುಪ್ರಾಣಿಯೆಂದು ಬಗೆದು ಬಾಣ ಬಿಟ್ಟ ತುಂಬು ಗರ್ಭಿಣಿಯಾದ ಅವಳು ಸ್ಥಳದಲ್ಲಿಯೇ ಲಿವಿ ಲಿವಿ ಒದ್ದಾಡಿ ಸತ್ತಳು. ವಿಷಯ ತಿಳಿದ ಗಾಜನಾಯಕ ಸ್ಥಳಕ್ಕೆ ಬಂದು ನೋಡಿದಾಗ ಇಬ್ಬರಿಗೂ ಕಾಳಗ ಏರ್ಪಡುತ್ತದೆ. ಅನೇಕ ಸೈನಿಕರು ಹತರಾಗುಲಾರೆ ಕಾದಾಟದಲ್ಲಿ ಸೆಣಸಾಡಿದ ಗಜನಾಯಕ ಮರಣ ಹೊಂದುತ್ತಾನೆ. ನಂತರ ದಡ್ಡಿ ಸೂರನಾಯಕನು ಹಿರೇಹಳ್ಳಿಗೆ ಓಡಿ ಹೋಗುವನು. ಅವನು ನೆಲಮಾಳಿಗೆಯಲ್ಲಿ ಐಕ್ಯನಾದನೆಂದು ಕೆಲವು ವಿರೋಧಿಗಳು ಅವನನ್ನು ಕೊಂದರೆಂದು ಸಹ ತಿಳಿದು ಬರುತ್ತದೆ. ಇಂಥ ಪ್ರಸಂಗಗಳು ಬೇಡರಲ್ಲಿ ನಡೆಯುವುದು ಅಸಹಜವೇನಲ್ಲ. ಅವನ ಸಮಾದಿ ಹಿರೇಹಳ್ಳಿಯಲ್ಲಿದ್ದು, ದಡ್ಡಿ ಸೂರನಾಯಕ ದೇವಾಲಯವೆಂದು ಖ್ಯಾತಿಗೊಂಡಿದೆ. ಹಬ್ಬ, ಜಾತ್ರೆ, ಉತ್ಸವಗಳು ಇಲ್ಲಿ ಜರುಗುತ್ತವೆ.[೫]

ಇಲ್ಲಿಯ ವಿಶೇಷತೆ ಏನೆಂದರೆ ಮ್ಯಾಸಬೇಡ ಸಮುದಾಯದಲ್ಲಿ ಮೊದಲು ಪೂಜೆಯು ನಡೆಯುವುದು (ಜಾತ್ರೆ) ದಡ್ಡಿ ಸೂರನಾಯಕನಿಗೆ. ನಂತರ ಸೂರಪ್ಪನ ಜಾತ್ರೆ. ನಂತರ ಕಂಪಳದೇವರ ಜಾತ್ರೆ ನಡೆಯುತ್ತದೆ. ದೇವಸ್ಥಾನದ ಬಾಗಿಲನ್ನು ತೆಗೆಯುವುದಿಲ್ಲ. ಪೂಜಾರಿಯು ಪೂಜೆ ಮಾಡುವ ಸ್ಥಳದಲ್ಲಿ ಬಾಯಿಗೆ ಬಟ್ಟೆ ಕಟ್ಟಿಕೊಂಡು ಪೂಜೆ ಮಾಡುತ್ತಾನೆ. ಈತನಿಗೆ ದೇವರ ಎತ್ತುಗಳಿವೆ. ಇವು ದಡ್ಡಿ ಎದ್ದೂ ಗೂಡಿನಲ್ಲಿವೆ. ಹಬ್ಬದ ಸಂದರ್ಭಗಳಲ್ಲಿ ಬರುತ್ತವೆ.

### ಡಿಕ್ಕಿ ಹಬ್ಬ

ನನ್ನಿವಾಳದಲ್ಲಿ ಗಾದ್ರಿಪಾಲನಾಯಕ ಮತ್ತು ಬಂಗಾರು ದೇವರಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಪ್ರತಿವರ್ಷ ಗುಗ್ಗರಿ ಹಬ್ಬ ನಡೆಯುತ್ತದೆ. ಈ ಸಂದರ್ಭದಲ್ಲಿ ಈ ಡಿಕ್ಕಿ ಹಬ್ಬ ಆಚರಿಸಲಾಗುತ್ತದೆ. ಇದು ಮಹಿಳೆಯರೇ ಪಾಲ್ಗೊಳ್ಳುವ ಆಚರಣೆ. ನನ್ನಿವಾಳದ ದೊರೆಯ ಮನೆತನದ ಹೆಣ್ಣು ಮಕ್ಕಳು ಅಂದರೆ ದೊರೆಯ ಸಹೋದರಿಯರು ಮತ್ತು ಬಂಗಾರ ದೇವರ ಪೂಜಾರಿಯ ಸಹೋದರಿಯರ ಮದ್ಯ ಒಂದು ಪುಟ್ಟ ಹುಲಿಯನ್ನು ಮಾಡಿ ಅದನ್ನು ಪೆಟ್ಟಿಗೆಯಲ್ಲಟ್ಟು ಮ್ಯಾಸಬೇಡರು ಇಲ್ಲಿ ಪೂಜಿಸುತ್ತಾರೆ. ದನಗಾಹಿಯಾಗಿದ್ದ ಗಾದರಿಪಾಲನಾಯಕನ ಬಂದುಗಳು ಹುಲಿಯ ಮರಿಗಳನ್ನು ಕೊಂದ ಕಾರಣಗಳಿಂದಾಗಿ ರೊಚ್ಚಿಗೆದ್ದ ಹುಲಿ ಮರಿಗಳ ತಾಯಿ ಮತ್ತು ತಂದೆ ಹುಲಿ ಇವನೊಂದಿಗೆ ಘರ್ಷಣೆಗಿಳಿಯುತ್ತವೆ. ಮೊದಲು ಗಂಡು ಹುಲಿ ಸಾಯುತ್ತದೆ. ಆ ಸ್ಥಳ ಬಿಟ್ಟು ಈತ ಮಿಂಚೇರಿ ಕಡೆ ಹೋದಾಗ ಅಲ್ಲಿಗೂ ಹಿಂಬಾಲಿಸಿಕೊಂಡು ಹೋದ ಹೆಣ್ಣು ಹುಲಿ ಈತನೊಂದಿಗೆ ಹೋರಾಡಿ ತಾನೂ ಮಡಿಯುತ್ತದೆ. ಈತನೂ ಸತ್ತು ಹೋಗುತ್ತಾನೆ. ಕಾಡಿನ ವಾಸಿಗಳಾಗಿದ್ದ ಇವರು ನಿರಂತರವಾಗಿ ಇಂತಹ ಕ್ರೂರ ಮೃಗಗಳ ಭಯದಲ್ಲಿಯೇ ಬದುಕುವ ಅನಿವಾರ್ಯವನ್ನು ಈ ಘಟನೆ ಸ್ಪಷ್ಟಪಡಿಸುತ್ತದೆ.

ಅಂದಿನಿಂದ ಹುಲಿಯೊಂದಿಗೆ ಅನುಸಂಧಾನ ಮಾಡಿಕೊಡುವಂತೆ ಮ್ಯಾಸ ಬೇಡರು ಈ ಹುಲಿಯ ಪ್ರತಿಮೆಯನ್ನು ಬಂಗಾರ ದೇವರು ಎಂಬ ಹೆಸರಿನಲ್ಲಿ ಪೂಜಿಸುತ್ತಾರೆ. ಕರ್ನಾಟಕದ ಬುಡಕಟ್ಟುಗಳಲ್ಲೊಂದಾದ ಕರೆ ಒಕ್ಕಲಿಗರು ಹುಲಿ ದೇವರನ್ನು ಪೂಜಿಸುವ ಪದ್ಧತಿ ಇದೆ.

ಡಿಕ್ಕಿ ಹಬ್ಬದ ಆಚರಣೆಯ ಹಿನ್ನೆಲೆ ಗಮನಿಸಿದಾಗ ಈ ಗಾದ್ರಿಪಾಲನಾಯಕ ಮತ್ತು ಹುಲಿಯ ಮಧ್ಯ ನಡೆದ ಹೋರಾಟದ ಸಾಂಕೇತಿಕ ಆಚರಣೆ ಇದು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಭಾಗವಹಿಸುವವರು ಮಹಿಳೆಯರು ಎಂಬುದು ಮತ್ತೊಂದು ವಿಶೇಷ. ಗಾದ್ರಿಪಾಲನಾಯಕ ಅಂದರೆ ಈತನ ಪರಂಪರೆಯನ್ನು ಇಂದು ನನ್ನಿವಾಳದ ದೊರೆಗಳು ಎಂದು ಕರೆಯಲಾಗುತ್ತದೆ. ಈ ಮನೆತನದ ಸಹೋದರಿಯರು ಇವರೀರ್ವರ ಮಧ್ಯಯೇ ಡಿಕ್ಕಿ ಹಬ್ಬ ನಡೆಯುವುದು. ಈ ಇಬ್ಬರಿಗೂ ಮೊದಲು ಹಣೆಗೆ ಅರಿಷಿಣ (ಬಂಡಾರ) ಹಚ್ಚುತ್ತಾರೆ. ನೂರಾರು ಮಂದಿ ನೆರೆದಿರುತ್ತಾರೆ. ಆಗ ದೊರೆ ಅಲ್ಲಿರುವುದಿಲ್ಲ. ಪರಸ್ಪರ ಎರಡೂ ಬಣದ ಮಹಿಳೆಯರು ಪರಸ್ಪರ ಹೂಂಕರಿಸುತ್ತ ಡಿಕ್ಕಿ ಹಾಕುತ್ತಾ ಎದುರು ಬದುರಾಗಿ ಕುಳಿತು ತಲೆಗೆ ತಲೆ ಘಟ್ಟಿಸಿಕೊಳ್ಳುತ್ತಾರೆ. ಗಾಯವಾಗಿ ರಕ್ತ ಒಸರುವ ಮಟ್ಟಿಗೆ ಇರುವರು ಡಿಕ್ಕಿ ಹೊಡೆಯುತ್ತಾರೆ. ನೆರೆದ ಜನ ಎರಡೂ ಬಣದವರನ್ನು ತಮ್ಮವರನ್ನು ಪ್ರೋತ್ಸಾಹಿಸುತ್ತಾರೆ. ಇದೊಂದು ಮನರಂಜನೆಗಾಗಿ ಹೂಡಿದ ಆಟವೇನೋ ಎಂಬಂತಿರುತ್ತದೆ. ಆದರೆ ಇದರ ಹಿನ್ನೆಲೆಯ ಬೇರೆಯಾಗಿದೆ. ಹೆಚ್ಚು ಪ್ರಶ್ನೆ ಮಾಡುತ್ತಾ ಕೆದಕಿದಂತೆ ಸತ್ಯಾಂಶ ಹೊರ ಬೀಳುತ್ತದೆ. ಅಂದು ಗಾದ್ರಿಪಾಲನಾಯಕ ಮತ್ತು ಹುಲಿಯೊಂದಿಗೆ ನಡೆದ ಹೋರಾಟವಿದು. ಸಾಂಕೇತಿಕವಾಗಿ ಬಲಿ ಕೊಡುವುದು. (ತೆಂಗಿನಕಾಯಿ, ಕುಂಬಳಕಾಯಿ ಇತ್ಯಾದಿ) ಮುಂದೆ ಬರಲಿರುವ ವಿಪತ್ತುಗಳನ್ನು ತಡೆಯಲು ಮೊದಲೇ ಆ ದೇವರಿಗೆ ತಮ್ಮ ಬಲಿಯಾಗದಿರಲಿ ಎಂದು ಬೇರೆಯ ಪ್ರಾಣಿ ಮತ್ತು ಇತರೆ ವಸ್ತುಗಳನ್ನು ಬಲಿ ಕೊಡುವ ಸಂಸ್ಕಾರವನ್ನು ಮನುಷ್ಯ ರೂಢಿಸಿಕೊಂಡ. ಇಲ್ಲಿಯೂ ಹುಲಿಯಿಂದ ಗಾದ್ರಿಪಾಲನಾಯಕ ಮರಣ ಹೊಂದಿದಾಗ ಮತ್ತೆ ಇನ್ನೊಂದು ಅಂತಹ ಪ್ರಸಂಗ ಜರುಗದೇ ಇರಲಿ ಎಂದು ಮೊದಲೇ ಹೇಗೆ ಸಂಘರ್ಷವೇರ್ಪಟ್ಟಿದೆ. ಮತ್ತೊಂದು ವಿಶೇಷವೆಂದರೆ ಅಲ್ಲಿ ಹುಲಿ ಅಂದರೆ ಬಂಗಾರು ದೇವರು ಪೂಜಾರಿಯ ಮನೆಯ ಹೆಣ್ಣು ಮಗಳು. ಗೆದ್ದರೂ ಸಹ ನಿರ್ಣಯ ಕೊಡುವುದು ದೊರೆಯ ಕಡೆಯವರು. ಸೋತರು ಎಂದರೆ ದೊರೆಯ ಪ್ರತಿಷ್ಠೆಗೆ ಭಂಗವಾಗುತ್ತದೆ ಎಂಬ ಕಾರಣವಲ್ಲ. ಸೋತರು ಎಂದರೆ ದೊರೆ ಹುಲಿಗೆ ಸೋತ ಅರ್ಥಾತ್ ದೊರೆ ಸತ್ತ ಎಂಬ ತೀರ್ಮಾನವಾದಂತೆ ದೊರೆಗೆ ಸಾವಾಗುತ್ತದೆ ಎಂಬ ಪ್ರತೀತಿ ಬೆಳೆದಿರುವುದರಿಂದ ಗೆಲುವನ್ನು ಅವರಿಗೆ ಬಿಟ್ಟು ಕೊಟ್ಟು ದೊರೆಯನ್ನು ಉಳಿಸುವ ಆಶಯ ಇದಾಗಿದೆ. ಹೀಗೆ ಇದೊಂದು ವಿಶಿಷ್ಟವಾದ ಆಚರಣೆ ಮಹಿಳೆಯರೇ ಏಕೆ ಇದನ್ನು ನಡೆಸುತ್ತಾರೆ. ಎಂದರೆ ತಮ್ಮ ತವರನ್ನು ರಕ್ಷಿಸುವ ಹಂಬಲಕ್ಕಾಗಿ ಎಂಬ ಪ್ರತೀತಿ ಇಲ್ಲಿದೆ.[೬]

## ಬಂಗಾರ ದೇವರು

ಚಳ್ಳಕೆರೆ ತಾಲೂಕಿನ ನನ್ನಿವಾಳ ಪಕ್ಕದಲ್ಲಿ ಬಂಗಾರಹಟ್ಟಿ ಎಂಬ ಗ್ರಾಮವಿದೆ. ಮ್ಯಾಸ ಬೇಡರ ಕೆಲವು ದೇವಾಲಯಗಳಿಗೆ ಆಧುನಿಕತೆಯ ಗಾಳಿ ಬೀಸಿದೆ. ಆದರೆ ಬಂಗಾರ ದೇವರ ಹಟ್ಟಿಯಲ್ಲಿ ಆಧುನೀಕರಣದ ಗಾಳಿ ಬೀಸಿದ್ದರೂ ದೇವಸ್ಥಾನವು ಮಾತ್ರ ಗುಡಿಸಲಿನಿಂದ ಕೂಡಿದೆ. ಹೊಸ ದೇವಾಲಯದ ರಚನೆ ಕಂಡು ಬಂದಿಲ್ಲ. ಸುತ್ತಲೂ ಪಾಳಿಯನ್ನು ಮಾತ್ರ ಕಲ್ಲುಗಳಿಂದ ನಿರ್ಮಿಸಿದ್ದಾರೆ. ಆದರೆ ದೇವಾಲಯವು ಏದೇ ಸೊಪ್ಪುಗಳಿಂದ ನಿರ್ಮಾಣವಾಗಿದೆ. ಇದರ ಬಾಗಿಲು ದಕ್ಷಿಣಾಭಿಮುಖವಾಗಿದೆ ಈ ದೇವಸ್ಥಾನದ ಪೂಜಾರಿ ಬೋರಯ್ಯ ಈತನು ಬುಲ್ಲುಡು ವಂಶಸ್ಥರಿಗೆ ಸೇರಿದವನು. ವಿಶೇಷತೆಯೆಂದರೆ ಇಲ್ಲಿಯ ಪೂಜಾರಿಗೆ ಒಟ್ಟವನ್ನು ಕಟ್ಟುವುದು ಕಂಪಳ ದೇವರ ಹಟ್ಟಿಯಲ್ಲಿ. ಗುಗ್ಗರಿ ಹಬ್ಬದ ಸಂದರ್ಭದಲ್ಲಿ ಬಂಗಾರ ದೇವರು ನನ್ನಿವಾಳಕ್ಕೆ ಹೋಗುತ್ತದೆ. ಅಲ್ಲಿ ಕೆಲವು ಆಚರಣೆಗಳನ್ನು ಮಾಡುತ್ತಾರೆ. ಸೋಮವಾರ ಹೋಗಿ ಎತ್ತುಗಳನ್ನು ಮಂಗಳವಾರ ಓಡಿಸುತ್ತಾರೆ. ಬುದವಾರ ಬೇಟೆ ಮಾರ್ಗ ಹೋಗಿ ಮೆರವಣಿಗೆ ನಡೆಯುತ್ತದೆ. ಗುರುವಾರ ಹಿಂದಿರುಗಿ ಬರುತ್ತಾನೆ. ಬಂಗಾರ ದೇವರು ಪೆಟ್ಟಿಗೆ ದೇವರು ನನ್ನಿವಾಳಕ್ಕೆ ಈ ವೇಳೆಯಲ್ಲಿ ಬಂದು ಸೇರುವ ದೇವರುಗಳೆಂದರೆ ಬಂಗಾರ ದೇವರು ಬಂಗಾರಹಟ್ಟಿ ಗಾದ್ರಿದೇವರು, ಬೊಮ್ಮದೇವರು, ಮುತ್ತಿಗಳ ದೇವರು ನನ್ನಿವಾಳ ಬೋಸೆ ದೇವರು. ನಲಜಾಮನಹಟ್ಟಿ ಈ ದೇವರುಗಳು ಶಿವರಾತ್ರಿಯಲ್ಲಿ ಹಾಗೂ ದೀಪಾವಳಿಯಲ್ಲಿ ಬಂದು ಸೇರುತ್ತವೆ.

## ಕೊಡಗು ಬೊಮ್ಮನ ದುರಾಡಳಿತದ ವಿರುದ್ದ ಪ್ರತಿಭಟನೆ

ಮ್ಯಾಸ ಮಂಡಳಿಯವರು ಷರತ್ತಿನಂತೆ ಕೊಡುತ್ತಾ ಬಂದಿರುವ ಬಹುಮಾನವನ್ನು ಕಾಲಾಂತರದಲ್ಲಿ ನಿಲ್ಲಿಸಿದನು. ಇದರಿಂದ ಕೆಂಡಕಾರಿದ ಕೊಡಗು ಬೊಮ್ಮನಿಗೆ ವಿದಾಯ ಹೇಳಿ ಅವನಿಗೆ ತೆರಿಗೆ ಕೊಡದೇ ರಾತ್ರೋ ರಾತ್ರಿ ಪಲಾಯನ ಮಾಡಿದರು. ಮ್ಯಾಸ ಮಂಡಲ ಯರಮಂಚಿನಾಯಕ ರಾತ್ರಿಯಲ್ಲಿ ಹಟ್ಟಿಗಳನ್ನು ಕಿತ್ತುಕೊಂಡು ತನ್ನ ಪರಿವಾರವನ್ನು ರೇಕು (ಫಲ) ಲಕೂಟೆ ಬೆಣ್ಣೆ ಮುದ್ದೇನಹಳ್ಳಿ ಮಾಪೀನಹಳ್ಳಿ ರೇಪೋನಹಳ್ಳಿಗಳಲ್ಲಿ ನೆಲೆಸುತ್ತಾ ಸಾಗಿದರು. ಯರಮಂಚಿನಾಯಕ ೧೨ ಪೆಟ್ಟಿಗೆಗಳಿಗೆ ಪಾಡ್ವ ಮಾಡಬೇಕೆಂದು ೧೦೦೦ ಧಗುಮ (ನಗಾರಿ) ಗಳನ್ನು ಕಟ್ಟಿಸಿ ದೇವರನ್ನು ಮಾಡುವ ಕಾಲದಲ್ಲಿ ಈ ಸಂಗತಿ ಕೋಡಗಲ ಬೊಮ್ಮನಿಗೆ ತಿಳಿಯುತ್ತದೆ. ಬೊಮ್ಮ ಬಂದು ೧೦೦೦ ಧಗಮುಗಳನ್ನು ಹರಿದು ಹೋಗುವಂತೆ ಒಡೆದು ಉಪದ್ರ ಕೊಡುವನು. ಯರಮಂಚಿನಾಯಕನ ಬಳಿ ಇದ್ದ ಕೊಳಗಗಳನ್ನು ಕೊಟ್ಟು 'ಮುಚ್ಚಲಗುಮ್ಮಿ' ಎಂದು ಹೆಸರಿಟ್ಟನು. ಮುಂದೆ ಹೋಗುವಾಗ ಮಹದೇವಪುರ ಬಾಗೇನಾಳುಪರಿಗಳಲ್ಲಿ ಕಕ್ಕಲು ಬೆಂಚ ಪಾಡ್ಯ (ಪರವು) ಮಾಡಬೇಕಾದರೆ ೬ ಅಜ್ಜ ಕಾಮಗೇತಿ ಮದಕರಿ ಭೂಪಾಲನನ್ನು ಕಗ್ಗಲ್ಲೂಕಾಮಗಾತಿ ಎಂದು ಗೋತ್ರವನ್ನು ಗೊತ್ತುಪಡಿಸಿದರು. ನಂತರ

ತಮ್ಮಟ ಕಲ್ಲಿಗೆ ಬಂದು ಯರಗುಂಟ ನಾಯಕನು ತಮ್ಮ ನಾಯ್ಕನ ಒಬವ್ವನನ್ನು ಮೋಹಿಸಿ ಓಬಳಗುಡ್ಡಕ್ಕೆ ಬಂದು ಅಲ್ಲಿ ಚಿತ್ತಯ್ಯ ಕಾಟಯ್ಯ ಜನಿಗಿಯ ಹಾಲನ್ನು ಕರೆದು ಆನೆ ಮೇಲೆ ಹಾಲು ಮೊಸರನ್ನು ಹೇರಿಕೊಂಡು ಯರಮಂಚಿನಾಯಕನ ಹತ್ತಿರ ಬಂದರು. ಹೀಗೆ ಬರುವಾಗ ಜಾರಿ ಬಿದ್ದು ಹಾಲು ಮೊಸರು ಹಳ್ಳವಾಗಿ ಹರಿಯಿತು. ಹರಿದ ಹಳ್ಳಕ್ಕೆ 'ಜನಿಗಿಹಳ್ಳ' ವೆಂದು ಶಾಸನ ಬರೆಸಿದರು. ಮ್ಯಾಸಮಂಡಳಿಯನ್ನು ಯರಮಂಚಿನಾಯಕ ಗೌರಿಪುರದ ಹತ್ತಿರ ಬೃಹತ್ ಗಾತ್ರದ ಬೇವಿನ ಮರದ ಸಮೀಪ ಚಿಂತಕುಂಟ್ಲು ಬೋರನನ್ನು ನಿರ್ಮಾಣ ಮಾಡಿದನು. ನಮ್ಮ ದೇವರ ಹತ್ತಿರ ಸತ್ಯವಿದ್ದರೆ ನಾಳೆ ಸೂರ್ಯ ಹುಟ್ಟುವುದರೊಳಗಾಗಿ ಹಸಿ ಮರವು ಒಣಗಬೇಕೆಂದು ಕೈಮುಗಿದ ಹಾಗೆಯೇ ಅದು ಒಣಗಿ ಹೋಯಿತು. ಚಿಗುರಬೇಕೆಂದು ಕೋರಿಕೊಂಡಂತೆ ಸೂರ್ಯ ಹುಟ್ಟುವುದರೊಳಗಾಗಿ ಒಣಗಿದ ಮರವು ಚಿಗುರಿತು. ವೈಜ್ಞಾನಿಕವಾಗಿ ಇದನ್ನು ನಂಬಲು ಸಾಧ್ಯವೆಂದರೆ ಸುಟ್ಟ ಮರಕ್ಕೆ ನೀರು ಗೊಬ್ಬರ ಹಾಕಿದರೆ ಚಿಗುರುವುದು ಸಹಜ ಒಂದೇ ದಿನದಲ್ಲಿ ಆಗುವುದು ಪವಾಡವೇ ಸರಿ!

ಯರಮಂಚಿನಾಯಕ ಮ್ಯಾಸಮಂಡಲ ಅಜ್ಜನಿಗೆ ಕೈ ಮುಗಿದು ತಾತಾ ನಿನ್ನ ಸತ್ಯದಂತೆ ವಾರದೊಳಗೆ ಕೊಡಗುಬೊಮ್ಮನು ಸತ್ತರೆ ನಿನಗೆ ಒಂದು ಕಾಯಿ ಏಳು ಗುಂಡಿಗೆ ಹೊಡಿಸಿ ಮಂದೇ ಹೋತನ್ನು ಏಳು ಭಾಗ ಕತ್ತರಿಸಿ ೧೦೧ ದೀಪಗಳನ್ನು ಹಚ್ಚಿ ಶುಕ್ಲಪರ್ವತಕ್ಕೆ ಕೈಮುಗಿದು ತಮ್ಮ ತಮ್ಮ ಹಟ್ಟಿಗಳಿಗೆ ತೆರಳಿದರು. ನಾಯಕನ ಕೋರಿಕೆಯಂತೆ ಭೋರವ್ವನ ಶಾಪದಿಂದ ಕೊಡಗು ಬೊಮ್ಮನು ಮರಣ ಹೊಂದಿದನು. ವಿಷಯ ತಿಳಿದ ಸೂರಪ್ಪನಾಯಕ ಚಿನ್ನಪಲ್ಲಿನಾಯಕ ಕಸ್ತೂರಿ ರಂಗಪ್ಪನಾಯಕ ದಳಪತಿ ಕಾಮಗೇತಿಯನ್ನು ಕರೆಯಿಸಿದರು. ಇವರೆಲ್ಲ ಸೇರಿ ತಮ್ಮಲ್ಲಿ ಸತ್ಯ ಇದೆಯೋ ಅಥವಾ ಯರವಂಚಿನಾಯಕನಲ್ಲಿರುವುದೋ ಪರೀಕ್ಷಿಸಬೇಕೆಂದು ದೊಡ್ಡ ಶನಿವಾರ ದಂದು ಬೋರವ್ವನನ್ನು ಮಾಡಲು ತೀರ್ಮಾನಿಸಿದರು. ಅದರಂತೆ ಯರಮಂಚಿಗೆ ಸುಳ್ಳು ಹೇಳ ಬಾರದೆಂದು ಕಾಮಗೇತಿಯನ್ನು ಅವರ ಹತ್ತಿರ ಕಳುಹಿಸುವರು. ಅವನು ಯರವಂಚಿನಾಯ ಕನಿಗೆ ನಾಳೆ ಶನಿವಾರ ಮೇಸ ಮಂಡಳಿಯವರು ಚಿಂತಗುಂಟ್ಲನಲ್ಲಿ ಪಾಡ್ಯ ಮಾಡುತ್ತಾರೆಂದು ತಿಳಿಸಿದ. ವಾಸೆ ಕೋಯ್ಯುಪಾಡ್ಯ ಎತ್ತಲು ಹೋಮವು ತೀರಲಿಲ್ಲವಾದ್ದರಿಂದ ಮೂರು ಮಂದಿ ನಾಯಕರು ಮ್ಯಾಸಮಂಡಲವನ್ನು ಕಾಮಗೇತಿ ನಿಮ್ಮಲ್ಲಿ ಸತ್ಯವಿಲ್ಲವೆಂದು ಮತ್ತು ದೊರೆಗಳಲ್ಲಿ ಸತ್ಯವಂತ ಮೂಲ ಪುರುಷ ಯರಮಂಚಿನಾಯಕನನ್ನು ಕರೆದು ಬರಲು ಕಾಮಗೇತಿ ನಡೆದ ಪ್ರಸಂಗ ಎಲ್ಲರಿಗೂ ತಿಳಿಯಿತು. ಮೂರು ಮಂದಿ ನಾಯಕರು ಮ್ಯಾಸಮಂಡಲ ಪಂಗಡ ಪಂಗಡವಾಗಿ ದಿಕ್ಕಾಪಾಲಾಗಿ ಓಡಿದರು. ಬುಲ್ಲುಡ್ಲುವನು ಬಂಗಾರದೇವರನ್ನು ಲೇಟುಕಲ್ಲಿಗೆ ತೆಗೆದುಕೊಂಡು ಹೋದನು. ಕುಂಡರ್ಲವನು ಓಬಳ ದೇವರನ್ನು ಶಿರಿವಾಳಕ್ಕೆ ಕಂಚೋಬಳ ದೇವರನ್ನು ಎಳಲುಭೂಪನು ವರಮಾಲಿಗೆ (ಜರಮಾಲಿಗೆ) ಉಳಿದ ದೇವಗಂಪಳ ಚದುರಿ ಹೋಯಿತು. ಯರಮಂಚಿ ನಾಯಕ ನನ್ನು ಕಾಮಗೇತಿ ಕರೆದುಕೊಂಡು ಬರುವಷ್ಟರಲ್ಲಿ ಕುಲಜಾತಿಯ ಹತ್ತು ಹಲವು ಪಂಗಡಗಳಾಗಿ ಚೆಲ್ಲಾಪಿಲ್ಲಿಯಾಗಿದ್ದಿತು.

## ಜಾತಿಯ ಪುನರ್ ಸಂಘಟನೆ

ಯರವಂಚಿನಾಯಕನು ಕುಲವೆಲ್ಲಾ ಚೆಲ್ಲಾಪಿಲ್ಲಿಯಾಗಿದ್ದು ಕಂಡು ಮಮ್ಮಲ ಮರುಗಿದನು. ಅತೀವ ದುಃಖಿತನಾಗಿ ಬೋರವ್ವನಿಗೆ ಹತ್ತಿರ ಶಪಥ ಮಾಡುವುದರೊಂದಿಗೆ ತನ್ನ ವಂಶ ಪರಂಪರೆಯಾಗಿ ಕಾಯಿ ಒಡೆಯುವುದಿಲ್ಲವೆಂದು ಕೈಎತ್ತಿಮುಗಿಯುವುದಿಲ್ಲವೆಂದು ತನ್ನ ಹಟ್ಟಿಗೆ ಮರಳಿದ. ಏಳು ಗುಂಡುಗಳನ್ನು ಹಾಕಿಸಿ ಒಂದೇ ಕಾಯಿ ಏಳು ಗುಂಡಿಗೆ ಹೊಡೆಯಿಸಿ ಹೆತ್ತ ಮಗನೆನ್ನುವಳು ವಾಸಿಯಳನ್ನಾಗಿ ಕೊಯ್ಯುತ್ತಾನೆ. ನಾಯಕ ನಂತರ ಕಾಮಗೇತಿ ಗುಡ್ಡು ಬೋರನನ್ನು ೧೦೧ ದೀಪಗಳನ್ನು ಹಚ್ಚಿ ಶುಕ್ಲು ಪರ್ವತಕ್ಕೆ ಹೋಗಿ ತಿಪ್ಪಯ್ಯನ ಕೋಟೆ ಹತ್ತಿರ ಕೈಮುಗಿದು ಓಂದುರಿಗಿ ಬರುವಷ್ಟರಲ್ಲಿ ಮ್ಯಾಸ ಮಂಡಲ ತೀವ್ರ ಸಂಘಟನೆಗೊಂಡು ಜಮಾಯಿಸಿತ್ತು.

ನಾಯಕ ಸಮುದಾಯದಲ್ಲಿ ವೈಷ್ಣವ ಮತ್ತು ಶೈವದೇವತೆಗಳೂ ಕಂಡು ಬರುತ್ತವೆ. ಬಹುಸಂಖ್ಯಾತ ನಾಯಕರು ವೈಷ್ಣವ ಪಂಥಕ್ಕೆ ಸೇರಿದವರು. ಅನೇಕ ಗೋತ್ರಗಳು ಸೇರಿ ಒಂದು ಪಂಥಕ್ಕ ದೇವರನ್ನಾಗಿ ಮಾಡಿಕೊಂಡಿದ್ದಾರೆ. ಗಿಡ್ಡ ಮುತ್ತೇನೋರು ಪೆನ್ನೋಬಳ ದೇವರು ಮಂದಲೋರು ಸಿರಿವಾಳ ಓಬಳದೇವರು ಯರ್ರಳ್ಳ ನಾಯಕರು ನಾಗಮುತ್ತಿವಾರು, ಪಾಲಮುತ್ತಿನವಾರು, ಬೆಡಗುಗಳು ಪೆನ್ನೋಬಳ ದೇವರನ್ನು ಆರಾದಿಸುವರು. ಕಂಡರ್ಲವಾಡು ಗುಡಿಹಳ್ಳಿ ಓಬಳ ದೇವರು ಪೂವಲರು ಪೆನ್ನೋಬಳ ಪಾಮುಡ್ಲಾರು ಗುರುನಾಥ ಓಬಳ ದೇವರುಗಳನ್ನು ಪೂಜಿಸುತ್ತಾರೆ. ಆಂಧ್ರದ ಅಹೋಬಲ ನರಸಿಂಹಸ್ವಾಮಿ ಇಲ್ಲಿನ ಬೇಡರಿಗೆ ಆರಾಧ್ಯ ದೈವವಾಗಿದೆ. ಅದೆ ರೀತಿ ಪೆನ್ನೋಬಳ, ಕಂಚೋಬಳ, ಕದರಿ, ತಿರುಪತಿ, ಶ್ರೀಶೈಲಗಳನ್ನು ತಮ್ಮ ಮೂಲಸ್ಥಳಗಳೆಂದು ಇಲ್ಲಿ ಪರಿಗಣಿಸಲಾಗಿದೆ. ಕನಾಟಕದ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಗೆದ್ದಲುಗಟ್ಟೆ ಬಂಜಗೆರೆ ಮಾಕನಡುಕ ಮತ್ತು ಮುದ್ಲಾಪುರ ಓಬಳದೇವರು ಮಾಕನಡಕದ ಓಬಳದೇವರುಗಳು ಪ್ರಮುಖವಾದವು. ಈ ದೇವರಿಗೆ ಪೂಜಾರಿಗಳು ಹೆಚ್ಚಾಗಿ ಮಳೆಲೊರೆಯಾಗಿರುತ್ತಾರೆ. ಓಬಳ ದೇವರ ಹಬ್ಬದ ಆಚರಣೆಗಳು ಹಾಗೂ ಗುಗ್ಗರಿ ಹಬ್ಬದ ಸಂದರ್ಭದಲ್ಲಿ ನಡೆಯುತ್ತವೆ.

## ಓಬಳ ನರಸಿಂಹ

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕು ಚಿಕ್ಕಜೋಗಿಹಳ್ಳಿಯಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿ ಮ್ಯಾಸಬೇಡರ ಪ್ರಮುಖ ಧಾರ್ಮಿಕ ಕೇಂದ್ರ ಮಾಕನಡುಕು ಹಳ್ಳಿಯಲ್ಲಿ ಕಂಚೋಬಳ ನರಸಿಂಹ ಸ್ವಾಮಿ ಮತ್ತು ಬಂಜಗೆರೆ ಓಬಳದೇವರ ಗುಗ್ಗರಿ ಹಬ್ಬವನ್ನು ಬಹಳ ವಿಜ್ರಂಭಣೆಯಿಂದ ಆಚರಿಸುತ್ತಾರೆ. ಊರಿನ ಹೊರಗೆ ಪೂರ್ವಕ್ಕೆ ಲಕ್ಕಿ ಸೊಪ್ಪಿನ ಬೆರಗು ಕಟ್ಟಿ ಅದರೊಳಗೆ ದೇವರನ್ನಿಟ್ಟು ಕೊಳ್ಳಿ ಬೆಳಕಿನಲ್ಲಿ ಗುಗ್ಗರಿ ಹಬ್ಬ ಮಾಡುತ್ತಾರೆ.

ಶುಕ್ರವಾರ ದಿನ ಚಿಕ್ಕ ಜೋಗಿಹಳ್ಳಿಯ ಹತ್ತಿರ ಸಿದ್ದಾಪುರದ ಬುಗ್ಗು ಹೊಳೆಯಲ್ಲಿ ಗಂಗೆ ಪೂಜೆ

ಮಾಡಿಕೊಂಡು ಬಂದು ಅದೇ ದಿನ ದೀಪೋತ್ಸವ ಮತ್ತು ದೇವರಿಗೆ ಕಂಕಣ ಕಟ್ಟುವ ಕಾರ್ಯ ಮಾಡುತ್ತಾರೆ. ಮಾಕನಡುಕು ಓಬಳ ದೇವರು ಗುಗ್ಗರೆ ಹಬ್ಬವನ್ನು ಮ್ಯಾಸಬೇಡರು ಬೆಂಕಿ ಬೆಳಕಿನಲ್ಲಿಯೇ ದೇವರ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಬೆಳಗಿನ ಜಾವ ಸಾರ ಇಳಿಸಿದ ನಂತರ ಭಾನುವಾರ ಮುಂಜಾನೆ ಸುಮಾರು ಆರು ಘಂಟೆಗೆ ದೇವರ ಪೂಜಾರಿ ಮತ್ತು ಜಂಗಮ ಗುರುಗಳು ಜೊತೆಗೂಡಿ ಮಡಿಯಿಂದ ಬಿಳಿ ಪಂಜೆಯನ್ನುಟ್ಟು ದೇವರ ಬೆತ್ತ ಮತ್ತು ನವಿಲು ಗರಿ ಹಿಡಿದುಕೊಂಡು ಸಕಲ ವಾದ್ಯಗಳೊಂದಿಗೆ ಮಾಕನಡುಕ ಗ್ರಾಮದಿಂದ ಸುಮಾರು ಒಂದು ಕಿ.ಮೀ.ದೂರದ ಪೂರ್ವ ದಿಕ್ಕಿನ ಈಶಾನ್ಯ ಮೂಲೆಯ ಸಮೀ ವೃಕ್ಷದ ಹತ್ತಿರ ಹೋಗಿ ಸೂರ್ಯ ನಾರಾಯಣನಿಗೆ ಬಾಳೆ ಎಲೆಯಲ್ಲಿ ಅವರೆ ಆಕಳದ ಹಾಲು, ತುಪ್ಪ, ಬಾಳೆ ಹಣ್ಣುಗಳನ್ನಿಟ್ಟು ಎಡೆ ಹಾಕಿ ಪೂಜೆ ಸಲ್ಲಿಸುತ್ತಾರೆ. ನಂತರ ಬನ್ನಿ ಮರದ ಹತ್ತಿರವೇ ಭೂಮಿಯನ್ನು ಮುಟ್ಟಿ ಪೂರ್ವಕ್ಕೆ ಮೂರು ಹೆಜ್ಜೆ ಮತ್ತು ಪಶ್ಚಿಮಕ್ಕೆ ಮೂರು ಹೆಜ್ಜೆ ಹಾಕಿ ಭೂಮಿ ತಾಯಿಯನ್ನು ಮುಟ್ಟಿ ಉದಯಿಸುತ್ತಿರುವ ಸೂರ್ಯನಿಗೆ ನಮಸ್ಕರಿಸುತ್ತಾರೆ. ಈ ಸಂಪ್ರದಾಯಗಳನ್ನು 'ಸೂರ್ಯಮೊಕ್ಕು' ಹೋಗುವುದು ಎಂದು ಕರೆಯುತ್ತಾರೆ.[೬]

**ಸೂರಲಿಂಗೇಶ್ವರ**

ದಾವಣಗೆರೆ ಜಿಲ್ಲೆ ಜಗಳೂರು ತಾಲೂಕಿನಲ್ಲಿ ಚಿಕ್ಕ ಗ್ರಾಮ ಕಾಮಗೇತಹಳ್ಳಿ. ಇದು ಜಗಳೂರಿನಿಂದ ಹತ್ತು ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ಕಾಮಗೇತಲಾರು ಹೆಚ್ಚಾಗಿ ವಾಸಿಸುವ ಕಾರಣ ಕಾಮಗೇತಹಳ್ಳಿ ಎಂದು ಕರೆಯಲಾಗಿದೆ. ಇಲ್ಲಿ ಸೂರ್ಯಲಿಂಗೇಶ್ವರ ದೇವಾಲಯವಿದೆ. ಇಲ್ಲಿರುವ ಸೂರಪ್ಪನಾಯಕ ಅವನೊಬ್ಬ ಬುಡಕಟ್ಟು ವೀರ ಇವನು ವೀರಮರಣ ಹೊಂದಿದ ನಂತರ ಆತನನ್ನು ದೈವತ್ವಕ್ಕೇರಿಸಿದ್ದಾರೆ. ಸೂರಪ್ಪ ಸೂರ್ಯಲಿಂಗೇಶ್ವರನೆಂದು ಆಕಾಶದಲ್ಲಿರುವ ಸೂರ್ಯ ನನ್ನು ತಮ್ಮ ವಂಶಕ್ಕೆ ಹಾಗೂ ದೇವರಿಗೆ ಹೆಸರಿಟ್ಟಿರುವ ಮ್ಯಾಸನಾಯಕರ ಸಂಸ್ಕೃತಿ ಅಮೋಘ. ಅಷ್ಟೇ ದೈವಾರಾಧನೆಗೆ ಪ್ರತೀಕವೂ ಆಗಿದೆ. ಒಂದು ಕಾಲದಲ್ಲಿ ವೈಭವದಿಂದ ಮೆರೆದ ಕೋಟೆ ಬುರುಜು ದ್ವಾರಗಳು ಶಿಥಿಲಗೊಂಡು ಕೇವಲ ಅವಶೇಷಗಳಷ್ಟೇ ಮೂಕ ಸಾಕ್ಷಿಯಾಗಿವೆ. ಇಲ್ಲಿರುವ ದೇವಾಲಯವು ಸಹಸ್ರಾರು ಭಕ್ತರಿಗೆ ಧಾರ್ಮಿಕ ಕೇಂದ್ರವಾಗಿ ಲೋಕ ಕಲ್ಯಾಣ ಸೇವೆಯಲ್ಲಿ ತೊಡಗಿವೆ. ಈ ದೇವರುಗಳಿಗೆ ಪೂಜಾರಿ ಮತ್ತು ಪಟ್ಟಾಧ್ಯಕ್ಷನಿದ್ದು ಆತನ ಹೆಸರು ನಿಜಲಿಂಗಪ್ಪ ಕೆಲವರಿಗೆ ತಮ್ಮ ಕುಲಗೋತ್ರಗಳನ್ನು ಇವರಿಂದ ತಿಳಿದುಕೊಳ್ಳಲು ಆಸ್ಪದವಾಗಿದೆ. ಇವರು ಜ್ವಲಂತ ಸಮಸ್ಯೆಗಳನ್ನು, ವಿವಾದಗಳನ್ನು, ನ್ಯಾಯ ತೀರ್ಮಾನಗಳ ಮೂಲಕ ಬಗೆಹರಿಸಿಕೊಂಡಿದ್ದಾರೆ. ಹುಣ್ಣಿಮೆ ಅಮವಾಸ್ಯೆಯೆಂದು ದೇವಾಲಯದಲ್ಲಿ ವಿಶೇಷ ಪೂಜೆ ಇರುತ್ತದೆ. ಮ್ಯಾಸನಾಯಕರ ಹಿರಿಯರು ವಲಸೆಯಿಂದ ಬೇಸತ್ತು ಒಂದೆಡೆ ನೆಲಸಬೇಕೆಂಬ ತೀರ್ಮಾನಕ್ಕೆ ಬಂದರು. ನೆಲಸುವ ತಾಣಕ್ಕಾಗಿ ಹುಡುಕಾಟದಲ್ಲಿದ್ದಾಗ ಒಂಟಿ ಕೋಡು ಬೆಳ್ಳಿ ಹಸು ಪಂಪಾದ್ರಿ ಬಸವರೊಂದಿಗೆ ದನಕರುಗಳಿಗೆ ಸೊಪ್ಪು ಹಾಕಿ ಮೇಯಿಸುತ್ತಿದ್ದರಂತೆ ನೋಡಲು ಹೊರಟಾಗ ನೆಗ್ಗಿಲ ಮುಳ್ಳು ನೆಲದಲ್ಲಿ ಚಿಕ್ಕ ಗಾತ್ರದ ತೆಗ್ಗಿಲ

ಮುಳ್ಳು ದಾರಿಯಲ್ಲಿ ಬಿದ್ದಿದ್ದು ಕೆಲವರು ಸ್ವಚ್ಛ ಮಾಡಿದಾಗ ಅವರನ್ನು ಹಿಂಬಾಲಿಸಿದರಂತೆ ಅಲ್ಲಿಗೆ ಹೋದ ಹಿರಿಯರೆಲ್ಲ ಸೇರಿ ಪಟ್ಟಪದಿಕೋಟೆಯನ್ನು ಮತ್ತು ಅದಕ್ಕೆ ಏಳು ಬಾಗಿಲನ್ನು ನಿರ್ಮಾಣ ಮಾಡಿದರೆಂದು ತಿಳಿಯುತ್ತದೆ. ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳದಲ್ಲಿ ಒಂಭತ್ತು ಚಿಲುಮೆಗಳನ್ನು ತೋಡಿ ಬಂದ ಜಲದಲ್ಲಿ ತಮ್ಮಲ್ಲಿದ್ದ ನಾರಾಯಣನ ಸಾಲಿ ಗ್ರಾಮವನ್ನು ಗಂಗಾ ಸ್ನಾನ ಮಾಡಿಸಿ ಪ್ರಮುಖ ಪೂಜೆಗಳಾದ ಮೇಲೆ ಅದಕ್ಕೆ ಸೂರಪ್ಪನೆಂದು (ಲಿಂಗ ಒಡೆಯ) ಹೆಸರಿಟ್ಟರು. ಕಾಮಗೇತಿ ವಂಶದ ಸಹೋದರ ಸಂಬಂಧಿಗಳು ಸೇರಿ ಪೂಜ್ಯನೀಯ ಸ್ಥಳವನ್ನು ನಿರ್ಮಾಣ ಮಾಡಿದ ಜಾಗದಲ್ಲಿ ನೆಲೆಸಿದರು. ಸ್ಥಳಕ್ಕೆ ಕಾಮಗೇತಿಹಳ್ಳಿ ಎಂದು ಹೆಸರನ್ನಿಟ್ಟರು.

ಈ ಗ್ರಾಮದಲ್ಲಿ ನೆಲೆಸಿದವರೆಲ್ಲ ಬಹುತೇಕ ಮ್ಯಾಸ ನಾಯಕರೆ. ಸೂರಪ್ಪ ದೇವರಿಗೆ ನಳ್ಳ ಟಬ್ಬ ಬೆಡಗಿನವರನ್ನು ಪೂಜಾರಿಯಾಗಿ ಪೂಜಾರಿಕೆ ಮಾಡುತ್ತಾರೆ. ಮ್ಯಾಸ ಮಂಡಳದಲ್ಲಿ ಮೂವರು ನಾಯಕರು ಇಬ್ಬರು ಪೂಜಾರಿಗಳು ಹಾಗೂ ಇಬ್ಬರು ಹಿರಿಯರು ಇರುತ್ತಾರೆ. ಇವರಲ್ಲಿ ನೆಲಗೇತಿ, ಕಾಮಗೇತಿ ಮತ್ತು ಬುಲ್ಲಡ್ಲು (ಯರಪೋತಿ) ಪೂಜಾರಿಯಾಗಿರುತ್ತಾರೆ. ಕಾಮಗೇತಿ ವಂಶದ ದೇವರಿಗೆ ಅದೇ ವಂಶದವನನ್ನು ಪೂಜಾರಿಯನ್ನಾಗಿ ಮಾಡದೇ ಬೇರೆ ಬೆಡಗಿನವರನ್ನು ಆ ಸ್ಥಾನಕ್ಕೆ ನೇಮಿಸಿರುವುದನ್ನು ವಿಶೇಷವಾಗಿದೆ.

**ಕಾಮಗೇತಿಯವರ ಹಕ್ಕು ಬಾಧ್ಯತೆಗಳು**

ಮ್ಯಾಸಬೇಡರು ಹಬ್ಬ ಹರಿದಿನಕ್ಕಿಂತ ಮದುವೆಯ ಆಚರಣೆಗೆ ಹೆಚ್ಚಿನ ಆದ್ಯತೆ ಕೊಡು ತ್ತಾರೆ. ಮ್ಯಾಸಬೇಡರಲ್ಲಿ ಕಂಬಳಿಗೆ ವಿಶೇಷ ಸ್ಥಾನಮಾನವಿದೆ. ಮದುವೆ ಸಂದರ್ಭದಲ್ಲಿ ಕಂಬಳಿ ಕಡ್ಡಾಯ ವಾಗಿ ಇರಲೇಬೇಕು, ಕಂಬಳಿ ಇಲ್ಲದೇ ಯಾವ ಆಚರಣೆಯನ್ನು ಮಾಡುವುದಿಲ್ಲ. ಜಗಳೂರಜ್ಜನು ಕೊರ್ಲಿ ಪಾಪನಾಯಕನೆಂದೆ ಹೆಸರು ಪಡೆದು ಯಾವಾಗಲೂ ತನ್ನ ಬಳಿಯಲ್ಲಿ ಕಂಬಳಿಯನ್ನಿಟ್ಟುಕೊಳ್ಳುತ್ತಿದ್ದ. ಚಳ್ಳಕೆರೆ ಜಗಳೂರಜ್ಜನ ಗುಡಿಯಲ್ಲಿ ಇಂದಿಗೂ ಸಹ ಕಂಬಳಿ ಹಾಸಿ ಪೂಜಿಸುವುದನ್ನು ನೋಡಬಹುದು. ಮ್ಯಾಸ ನಾಯಕರಲ್ಲಿ ಹುಟ್ಟಿನಿಂದ ಸಾಯುವವರೆಗೆ ಕಂಬಳಿಯ ಸ್ಥಾನ ಬಹಳ ಉನ್ನತವಾಗಿದೆ. ಋತುಮತಿ ಸಾವಿನ ವೇಳೆಯಲ್ಲಿಯೂ ಕಂಬಳಿಯನ್ನು ಬಳಸುವುದನ್ನು ಕಾಣಬಹುದು.

ಮದುವೆಯ ವಿವಿಧ ಕಾರ್ಯಕ್ರಮಗಳಲ್ಲಿ ಕಂಬಳಿ ಹಾಸುವ ಮತ್ತು ವೀಳ್ಯೆ ಹಿಡಿಯುವ ಮೊದಲ ಹಕ್ಕು ಕಾಮಗೇತಿಗೆ ಸೇರುತ್ತದೆ. ಇವರಿಗೆ ಅರಮನೆ ವೀಳ್ಯ ಬಂದಾಗ ಕಾಮಗೇತಿ ವ್ಯಕ್ತಿ ಅದನ್ನು ಪಡೆಯುತ್ತಾನೆ. ಒಂದು ವೇಳೆ ಕಾಮಗೇತಿ ಅವರು ಆ ಮದುವೆಯಲ್ಲಿ ಭಾಗವಹಿಸಿರ ಲಿಲ್ಲವೆಂದಾಗ ಜಿಂಪಲರಿಗೂ ಈ ವೀಳ್ಯೆ ಕೊಡುತ್ತಾರೆ. ಕಾಮಗೇತಿ ಇದ್ದರೆ ಮದುವೆ ಕಾರ್ಯಕ್ಕೆ ಪುರೋಹಿತನ ಅಗತ್ಯವಿಲ್ಲ. ಮದುವೆಯ ಕಾರ್ಯಗಳನ್ನು ಇವರೇ ನೆರವೇರಿಸಿ ಕೊಡುತ್ತಾರೆ. ಇದಕ್ಕೆ ಕಾರಣ ಮ್ಯಾಸಮಂಡಳಿಯ ಧಾರ್ಮಿಕ ಪರಂಪರೆಯಲ್ಲಿ ಕಾಮಗೇತಿಯವರಿಗೆ ಪೂಜಾರಿಯ ಹಕ್ಕನ್ನು ಕೊಟ್ಟಿರುತ್ತಾರೆ.[೮]

## ಸೂರಪ್ಪ ದೇವರ ಆಚರಣೆಗಳು

ಕಾಮಗೇತಿ ಹಳ್ಳಿಯ ಸೂರಪ್ಪನಾಯಕನಿಗೆ ಕಾಮಗೇತಿ ವಂಶಸ್ಥರಷ್ಟೇ ಅಲ್ಲದೇ ಇತರ ನಾಯಕ ಬುಡಕಟ್ಟಿನ ಜನರು ಮತ್ತು ಬೇರೆ ಬೇರೆ ಜಾತಿ ಸಮುದಾಯದವರು ಪೂಜಿಸುವುದು ಮತ್ತು ಭಕ್ತರಾಗಿ ನಡೆದುಕೊಂಡಿರುವುದು ವಿಶೇಷ. ಕಾಮಗೇತನಹಳ್ಳಿಯ ಕಟ್ಟೆ ಮನೆಗೆ ಸುಮಾರು ೨೨ ಹಳ್ಳಿಗಳ ಭಕ್ತರು ಶಿವರಾತ್ರಿ ಅಮವಾಸ್ಯೆ ಆದ ನಂತರ ಸೋಮವಾರ ಕಡಬಿನ ಹಬ್ಬವನ್ನು ದೊಡ್ಡ ಪ್ರಮಾಣದಲ್ಲಿ ಮಾಡುತ್ತಾರೆ. ಈ ದೇವರಿಗೆ ಬಳ್ಳಾರಿ ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳಿಂದ ಭಕ್ತರು ಆಗಮಿಸುತ್ತಾರೆ.

ಸೂರಪ್ಪ ದೇವರಿಗೆ ವರ್ಷಕ್ಕೆ ಮೂರು ಸಲ ಹಬ್ಬಗಳಾಗುತ್ತವೆ. ಒಂದು ಶಿವರಾತ್ರಿ ಆದ ನಂತರ ಕಡುಬಿನ ಹಬ್ಬ ದೀಪಾವಳಿ, ಮತ್ತು ಗುಗ್ಗರಿ ಹಬ್ಬ ಅಥವಾ ಕಾಳವ್ವನ ಹಬ್ಬ ಕಾಸು, ಮೀಸಲು ಸೋಮು, ಅಗ್ನಿ ಹೋಮ ಮತ್ತು ಒಂದುನೂರಾ ಒಂದು ಪಾಡ್ವ ಇತರ ಆಚರಣೆಗಳನ್ನು ಮಾಡಿಕೊಂಡು ಬಂದಿದ್ದಾರೆ. ಕಾಮಗೇತಿಹಳ್ಳಿ ಧಾರ್ಮಿಕ ನೆಲೆಗೆ ಭಕ್ತರ ಮಹಾಪೂರವೇ ಹರಿದು ಬರುತ್ತದೆ. ದೇವರೆತ್ತುಗಳಿದ್ದು ಬಸಪ್ಪನಹಟ್ಟಿಯ ಮಾಚುರು ನಾಯಕ ಇವುಗಳ ಕಿಲಾರಿ ಆಗಿರುತ್ತಾರೆ. ಮುದಕದಹಳ್ಳಿ (ಭರಮಸಮುದ್ರ) ಚೆಲುವಾದಿಗಳು ಉರಿಮೆ ಬಡಿಯುತ್ತಾರೆ.

## ಗೌರ ಸಮುದ್ರದ ಮಾರಮ್ಮ

ಗೌರಸಮುದ್ರ ಚಿತ್ರದುರ್ಗ ಜಿಲ್ಲೆಯಲ್ಲಿ ಬರುವ ಒಂದು ಗ್ರಾಮ. ಇಲ್ಲಿ ಮಾರಮ್ಮನ ದೇವಸ್ಥಾನವಿದೆ. ಆಕೆಯ ಹೆಸರಿನಿಂದಲೇ ಈ ಸ್ಥಳ ಪ್ರಸಿದ್ದಿಯನ್ನು ಪಡೆದಿದೆ. ಪ್ರತಿ ಹಳ್ಳಿಯಲ್ಲೂ ಸಾಮಾನ್ಯವಾಗಿ ಊರು ಮಾರಮ್ಮನ ದೇವಾಲಯವಿರುತ್ತದೆ. ಈ ಹಳ್ಳಿಯ ಲ್ಲಿಯೂ ಊರುಮಾರೆಮ್ಮನ ದೇವಾಲಯವಿದೆ. ಇದನ್ನು ಹೊರತುಪಡಿಸಿ ಮತ್ತೊಂದು ಮಾರೆಮ್ಮನ ದೇವಸ್ಥಾನವಿದ್ದು ಈಕೆ ಗೌರಸಮುದ್ರದ ಮಾರೆಮ್ಮ ಎಂದು ಪ್ರಸಿದ್ದಳಾಗಿದ್ದಾಳೆ. ಈಕೆಯ ಹೆಸರಿನಲ್ಲಿ ಆರಾಧನೆ, ಆಚರಣೆಗಳು ವಿಶಿಷ್ಟವಾಗಿವೆ. ಈ ದೇವತೆಯನ್ನು ಪ್ರಚಲಿತವಿರುವ ಕಥೆಗಳು, ಪವಾಡಗಳು, ಮತ್ತು ಆಚರಣೆಗಳ ಮೂಲತಃ ಈಕೆ ಮ್ಯಾಸಬೇಡ ಸಮುದಾಯಕ್ಕೆ ಸೇರಿದ ಮಹಿಳೆ ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಮ್ಯಾಸಬೇಡರ ತಂಡ ಈ ಪ್ರಾಂತ್ಯದಲ್ಲಿದ್ದು ಇವರು ನೆಲೆ ನಿಂತ ಬಳಿಕ ತನ್ನನ್ನು ನಂಬಿದ್ದ ಸಮುದಾಯಕ್ಕೆ ಹೊರಗಿನಿಂದ ಬಂದ ಬಿಕ್ಕಟ್ಟನ್ನು ನಿವಾರಿಸಿ ಆ ಮೂಲಕ ಸ್ಮರಣೆಯಲ್ಲಿ ಉಳಿದು ಬಂದಿರುವ ಈಕೆ ತನ್ನ ಸಮುದಾಯದವರಿಂದ ಮಾತ್ರವಲ್ಲದೇ ಇತರೇ ಸಮುದಾಯಗಳಿಂದಲೂ ಪೂಜೆಗೊಳ್ಳುತ್ತಿದ್ದಾಳೆ. ಇವರು ಕೋಣ, ಕುರಿ ಬಲಿ ಪಡೆಯುತ್ತಿರುತ್ತಾಳೆ. ಈ ಮಾರಮ್ಮ ಬುಡಕಟ್ಟಿನ ಮಹಿಳೆಯರಲ್ಲಿ ಜಾತ್ಯಾತೀತ ದೈವವಾಗಿ ಕಂಗೊಳಿಸುತ್ತಿದ್ದಾಳೆ. ಎಲ್ಲ ಜಾತಿಯವರು ಇವಳಿಗೆ ಪೂಜೆ ಸಲ್ಲಿಸುತ್ತಾರೆ.

ಗೌರಸಮುದ್ರಕ್ಕೆ ಸುಮಾರು ಒಂದು ಕಿ.ಮೀ.ದೂರದಲ್ಲಿ 'ತುಮ್ಮಲು' ಎಂಬ ಪ್ರದೇಶವಿದೆ.

ಈ ಪ್ರದೇಶ ಮಲಸಮುದ್ರ ಮತ್ತು ಗೌರಸಮುದ್ರದ ಮಧ್ಯ ಬರುತ್ತದೆ. 'ತುಮ್ಮೆ' ಜಾತಿಯ ಮರಗಳು ಹೆಚ್ಚಾಗಿರುವುದರಿಂದ ಇದನ್ನು ತುಮ್ಮಲು ಎಂದು ಕರೆಯುತ್ತಾರೆ. 'ಬನ್ನಿ' ಮರವನ್ನು ಹೋಲುತ್ತದೆ. ಇಲ್ಲಿ ಒಂದು ಆವರಣವಿದ್ದು ಒಳಗಡೆ ಎರಡು ಕಟ್ಟೆಗಳಿವೆ. ಸುಮಾರು ೨೫-೩೦ ಅಡಿಗಳಷ್ಟು ಎತ್ತರವಾದ ಕಲ್ಲಿನ ದೀಪಸ್ಥಂಭವಿದೆ. ಇದರ ಮೇಲೆ ಜಾತ್ರೆಯಲ್ಲಿ ದೀಪ ಹಚ್ಚುತ್ತಾರೆ. ಇಲ್ಲಿ ಮಾರೆಮ್ಮನ ಸಮಾಧಿ ಇದೆ ಎಂದು ಹೇಳಲಾಗುತ್ತದೆ. ಕೊ.ಶ.ವಿಶ್ವನಾಥ ಅವರು ಇಲ್ಲಿ ಮಾರಮ್ಮನ ಸಮಾಧಿ ಇದೆ ಎಂದು ತಮ್ಮ ಮಾರಿ ಮಾಹೇಶ್ವರಿ ಕೃತಿಯಲ್ಲಿ ಹೇಳುತ್ತಾರಾದರೂ ಈಗ ಅದರ ಕುರುಪುಗಳು ಸ್ಪಷ್ಟವಾಗಿ ಇಲ್ಲಿ ಕಂಡು ಬರುವುದಿಲ್ಲ. ಈ ಪ್ರದೇಶ ಬೇಡ ಗಂಪಳ ಓಡಾಡಿದ್ದ, ನೆಲೆಯೂರಿದ್ದ ಸ್ಥಳ. ಇಲ್ಲಿಂದ ಸುಮಾರು ಒಂದು ಕಿ.ಮೀ. ಅಂತರದಲ್ಲಿ 'ಲಿಂಗದ ಗುಡಿ' ಇದೆ. ನೂರಾ ಒಂದು ಲಿಂಗಗಳು ಇಲ್ಲಿವೆ ಎಂಬುದು ಪ್ರತೀತಿ ಇದೆ. ಹಿಂದೆ ಯರಮಂಚಿನಾಯಕನೆ ಮಾರಮ್ಮನ ಸೂಚನೆಯ ಮೇರೆಗೆ ಇದನ್ನು ಪ್ರತಿಷ್ಠಾಪಿಸಿದ ಎಂದು ಹೇಳುತ್ತಾರೆ.

### ದಡ್ಲು ಮಾರಮ್ಮ ದೇವರಹಳ್ಳಿ

ವೇದಾವತಿ ನದಿಯ ಉಪನದಿಯ ಬಯಲಿನಲ್ಲಿ ಚಿತ್ರದುರ್ಗ ಜಿಲ್ಲೆ ನಾಯಕನಹಟ್ಟಿ ಪ್ರಾಂತ್ಯದಲ್ಲಿ, ಕಾಟಮಲ್ಲನಾಯಕನ ನೇತೃತ್ವದಲ್ಲಿ ತಮ್ಮ ಪಶು ಸಂಪತ್ತಿನೊಂದಿಗೆ ಬಂದ ಬೇಡ ಗಂಪಳ ನೆಲೆಸಿತ್ತು. ಈ ಬೇಡಗಂಪಳಕ್ಕೂ ಮತ್ತು ನಿಡುಗಲ್ಲು ಪ್ರಾಂತ್ಯದಲ್ಲಿದ್ದ ಹೊಟ್ಟೆಣ್ಣನಾಯಕನಿಗೂ ಘರ್ಷಣೆಯಾಗುತ್ತದೆ. ಮ್ಯಾಸ ಬೇಡರ ಪಶುಸಂಪತ್ತನ್ನು ಹೊಟ್ಟೆಣ್ಣನಾಯಕ ಸೆರೆ ಹಿಡಿದು ಕೊಂಡೊಯ್ಯಲು ಬಂದಿರುತ್ತಾನೆ. ಆಗ ಈ ಅಕ್ಕರಾಯಮ್ಮನ ನೇತೃತ್ವದಲ್ಲಿ ಕಾಳಗ ನಡೆದು ಮ್ಯಾಸರು ವಿಜಯ ಪಡೆಯುತ್ತಾರೆ. ಸ್ವಲ್ಪ ಕಾಲದಲ್ಲಿಯೆ ಈ ಬೇಡಗಂಪಳದ ಮಧ್ಯೆ ಭಿನ್ನಾಭಿಪ್ರಾಯಗಳು ತಲೆದೋರಿ ಒಡಕುಂಟಾಗುತ್ತದೆ. ತಮ್ಮ ತಮ್ಮ ಪಶು ಸಂಪತ್ತನ್ನೂ, ಪೆಟ್ಟಿಗೆ ದೇವರುಗಳನ್ನೂ ಇನ್ನುಳಿದ ಸ್ವತ್ತುಗಳನ್ನೂ ಹಂಚಿಕೆ ಮಾಡಿಕೊಳ್ಳಬೇಕೆಂದು ಬಯಸುತ್ತಾರೆ. ಆಗ ಅಕ್ಕರಾಯಮ್ಮನ ನಿರ್ದೇಶನದಂತೆಯೇ ಇವೆಲ್ಲವುಗಳು ಹಂಚಿಕೆಯಾಗುತ್ತವೆ. ಎಲ್ಲರಿಗಿಂತ ಹಿರಿಯಳು ದಡ್ಲ ಮಾರಮ್ಮ ಎಂದು ಆಕೆಯ ಹೆಸರಿನಲ್ಲಿ ಒಂದು ಪೆಟ್ಟಿಗೆಯನ್ನು ಮಾಡಿಸಿ ಆಕೆಗೆ ಸಂಬಂಧಿಸಿದ ಸ್ವತ್ತುಗಳನ್ನು ಅದರಲ್ಲಿಡುತ್ತಾರೆ. ಒಟ್ಟಿಗೆ ದೇವರುಗಳನ್ನು ಹಂಚಿಕೆ ಮಾಡಿಕೊಳ್ಳುತ್ತಾರೆ. ಹೀಗೆ ಹಂಚಲ್ಪಟ್ಟ ಪೆಟ್ಟಿಗೆಗಳಲ್ಲಿ ಅಕ್ಕರಾಯಮ್ಮನ ಪೆಟ್ಟಿಗೆ 'ಎನುಮಲವರು' ಗುಂಪಿಗೆ ಸೇರಿದ 'ಮುಡೇನವರ' ಬೆಡಗಿನವರ ಉಸ್ತುವಾರಿಕೆಗೆ ಬರುತ್ತದೆ. ಎನುಮಲವರು ಅಕ್ಕರಾಯಮ್ಮನಿಗೆ ತವರಿನವರಾಗಬೇಕು. ಆಗ ಅದೇ ನಾಯಕನಹಟ್ಟಿ ಪ್ರಾಂತ್ಯದಲ್ಲಿರುವ ದೇವರಹಳ್ಳಿಯಲ್ಲಿ ಈ ಪೆಟ್ಟಿಗೆ ಇದ್ದು ಮುಡ್ಡೇನವರು ಅದನ್ನು ಪೂಜೆ ಮಾಡುತ್ತಾರೆ. ಇಲ್ಲಿಯವರೆಗೆ ಇದನ್ನು ದಡ್ಲುಮಾರೆಮ್ಮನ ಪೆಟ್ಟಿಗೆ ಎಂದು ಕರೆಯ ಲಾಗುತ್ತದೆ. ಈ ಪೆಟ್ಟಿಗೆಯನ್ನು ಮ್ಯಾಸಬೇಡರ ಪದ್ಧತಿಯಂತೆ ಹುಲ್ಲಿನ ಗುಡಿಸಲಿನಲ್ಲಿಯೇ ಇಟ್ಟು ಪೂಜಿಸಲಾಗುತ್ತದೆ. ಅಕ್ಕರಾಯಮ್ಮ ಉಪಯೋಗಿಸುತ್ತಿದ್ದ ಗಂಡುಗೊಡಲಿ, ತ್ರಿಶೂಲ, ಕತ್ತಿ, ಬಾಕು ಈ ದೇವಸ್ಥಾನದಲ್ಲಿದೆ ಎಂದು ಹೇಳುತ್ತಾರೆ. ಅವುಗಳನ್ನು ರೇಷ್ಮೆ ಬಟ್ಟೆಯಲ್ಲಿ

ಕಟ್ಟಿಡಲಾಗುತ್ತದೆ. ವಿಶೇಷ ಸಂದರ್ಭಲ್ಲಿ ಮಾತ್ರ ಅದನ್ನು ತೆಗೆದು ಪೂಜಿಸಲಾಗುತ್ತದೆ. ಎಂಬುದು ಅಲ್ಲಿಯ ಹಿರಿಯ ಪೂಜಾರಿಗಳ ಹೇಳಿಕೆಯಾಗಿದೆ. ಹಿರೇಹಳ್ಳಿ ಗುಡೇಕಟ್ಟೆಗೆ ಸೇರಿದವರು ರಣಗಂಭಗಳ ಬಳಿ 'ವಾಸೆ' ಕೊಯ್ಯುವ ಸಂಪ್ರದಾಯವಿದೆ. ಮುಖ್ಯವಾಗಿ ಇಲ್ಲಿ ಪಾಲ್ಗೊಳ್ಳುವವರು 'ಎತ್ತುಗಳವರು' ಎಂಬ ಬೆಡಗಿಗೆ ಸೇರಿದವರು. ಆಗ ಮಾತ್ರ ಈ ಆಯುಧಗಳ ಗಂಟನ್ನು ಬಿಚ್ಚಿ ಪೂಜೆ ಮಾಡಲಾಗುತ್ತದೆ.

೦೬.೦೩.೨೦೦೬ರ ಸೋಮವಾರದಂದು ಇತ್ತೀಚೆಗೆ ರಣಗಂಬಳಿ ಬಳಿ ವಾಸೆ ಕೋಯ್ಯು ನೋಮನ್ನು ಮಾಡಿದರು. ಈ ಆಯುಧಗಳ ಗಂಟನ್ನು ಗಂಗೆ ಪೂಜೆಗೆ ತೆಗೆದುಕೊಂಡು ಹೋಗಲಾಗುತ್ತಿತ್ತು. ದಡ್ಲ ಮಾರಮ್ಮನ ಪೂಜಾರಿ ದೇವರೆತ್ತುಗಳ ಕಿಲಾರಿಗಳ ಕೈಗೆ ರೇಷ್ಮೆ ಬಟ್ಟೆಯಲ್ಲಿ ಸುತ್ತಿದ್ದ ಆಯುಧಗಳನ್ನು ಗಂಟು ಮತ್ತು ದಡ್ಲಮಾರಮ್ಮಳ ಪೆಟ್ಟಿಗೆ ಮುಂದೆ ವಾಸೆ ಕೋಯ್ದರು. ಗಂಟನ್ನು ಬಿಚ್ಚಿ ಆಯುಧಗಳನ್ನು ಯಾರೂ ನೋಡಲಿಲ್ಲ. ಕಾರಣ ನೋಡಬಾರದೆಂಬ ಪ್ರತೀತಿ.

ಅರ್ಜುನ ಜೋಗಿಗಳು ಎಂಬ ಸಮುದಾಯದವರು ದೇವರ ಹಳ್ಳಿಯಲ್ಲಿ ನೆಲೆಸಿದ್ದಾರೆ. ಈ ಸಮುದಾಯದವರು ತುಂಬಾ ಭಯ ಭಕ್ತಿಯಿಂದ ದಡ್ಲ ಮಾರಮ್ಮನನ್ನು ತಮ್ಮ ಮನೆ ದೇವತೆ ಎಂದು ಪೂಜಿಸಿಕೊಂಡು ಬರುತ್ತಿದ್ದಾರೆ.

**ಗುಗ್ಗರಿ ಹಬ್ಬ**

ಶಿವರಾತ್ರಿ ಒಂದು ಮಂಗಳವಾರ ಈ ಹಬ್ಬವನ್ನು ಆಚರಿಸಲಾಗುತ್ತದೆ. ಆ ದಿನದ ಸಂಜೆ ವೇಳೆಗೆ ಮ್ಯಾಸಬೇಡರು ಮುಖ್ಯವಾಗಿ ಮುಡೇಲವರು ಮತ್ತು ಗಟ್ಟಿನಾಯಕನ ಬೆಡಗಿನವರು ಹುರಳಿ, ಅಕ್ಕಿ. ಕಾಸು, ಮೀಸಲನ್ನು ಹಾಲಿನೊಂದಿಗೆ ಬಂದು ಸೇರಿಸುತ್ತಾರೆ. ಜಾತಿ ಭೇದವಿಲ್ಲದೇ ಹುರಳಿ ಮತ್ತು ಅಕ್ಕಿಯನ್ನು ದೇವಸ್ಥಾನಕ್ಕೆ ತಂದು ಕೊಡುತ್ತಾರೆ. ಪೆಟ್ಟಿಗೆಗೆ ನಮಸ್ಕರಿಸಿದ ನಂತರ ಗುಗ್ಗರಿ ಮತ್ತು ಅನ್ನ ಸಿದ್ದವಾಗುತ್ತದೆ. ಆ ವೇಳೆಗೆ ಪೆಟ್ಟಿಗಗೆಗೆ ಕೆಂಪು ಹೊಸ ಬಟ್ಟೆಯನ್ನು ಸುತ್ತಿ ಬೆಳ್ಳಿಯ ಡಾಬನ್ನು ಇಟ್ಟು ಗೆಜ್ಜೆ ಬೆಳ್ಳಿಯ ಛತ್ರಿಕೆ ಮುಖಪದ್ಮ, ಕರಡಿಗೆ, ಕಣ್ಣು,ಮೂಗತಿ ಇಟ್ಟು ಅಲಂಕರಿಸುತ್ತಾರೆ. ಹರಕೆಯ ಹೊತ್ತ ಭಕ್ತರು ಸಾಕಷ್ಟು ಬೆಳ್ಳಿಯ ವಸ್ತುಗಳನ್ನು ಒಪ್ಪಿಸುತ್ತಾರೆ. ಪೆಟ್ಟಿಗೆ ಬೆಳ್ಳಿಯ ಕಂಗೊಳಿಸುತ್ತಿರುತ್ತದೆ.. ಹೂವು ಹೊಂಬಾಳೆಯಿಂದ ಅಲಂಕರಿಸಿದ ಈ ಪೆಟ್ಟಿಗೆಯನ್ನು ಹುರಳಿ ಗುಗ್ಗರಿ, ಅನ್ನ, ಮೀಸಲು ಮೊಸರು, ತೆಂಗಿನಕಾಯಿ, ಬಾಳೆಹಣ್ಣು ಇಟ್ಟು ಪೂಜೆ ಮಾಡುತ್ತಾರೆ.ಊರಿನ ಜನರಲ್ಲದೇ ಸುತ್ತಮುತ್ತಲಿನ ಹಳ್ಳಿಯ ಜನರು ಇಲ್ಲಿ ನೆರೆದಿರುತ್ತಾರೆ. ಗುಡಿಯ ಹೊರಗೆ ಕಂಬಳಿಯ ಗದ್ದಿಗೆ ಸಿದ್ದಪಡಿಸಿರುತ್ತಾರೆ. ಭಕ್ತರು ಸೂರ್ಯನಿಗೆ, ಪೆಟ್ಟಿಗೆಗೆ ಅಂದರೆ ದಡ್ಲಮಾರಮ್ಮಳಿಗೆ ನಮಸ್ಕರಿಸಿ ನಂತರ ಎಲ್ಲರಿಗೂ ಗುಗ್ಗರಿ ಪ್ರಸಾದ ಪಡೆಯುತ್ತಾರೆ.

**ಜಾತ್ರೆ**

ದೇವರಹಳ್ಳಿಯ ದಡ್ಲಮಾರಮ್ಮಳಿಗೆ ಅಲ್ಲಿ ಆಚರಿಸುವ ವಿಶೇಷವಾದ ಆಚರಣೆಯಿದು. ಯುಗಾದಿ

ಹಬ್ಬದ ಮಂಗಳವಾರ ಬಂದರೆ ದಿನವೇ ಹಬ್ಬ. ಇಲ್ಲದಿದ್ದರೆ ಯುಗಾದಿಯ ನಂತರ ಬರುವ ಮೊದಲ ಮಂಗಳವಾರ ಜಾತ್ರೆ ನಡೆಸಲಾಗುತ್ತದೆ. ಒಟ್ಟು ಆ ಊರಿನ ಜನತೆಗೆ ಆ ದಿನವೇ ಯುಗಾದಿ ಹಬ್ಬ ಅಲ್ಲಿಯವರೆಗೂ ಯಾರೂ ಬೇವು ಬೆಲ್ಲ ತಿನ್ನುವುದಿಲ್ಲ. ಸಮುದಾಯದವರೂ ಒಂದು ವಾರ ಮುಂಚೆಯೆ ಸೇರಿ ಮುಂದಿನ ಮಂಗಳವಾರ ಜಾತ್ರೆ ಎಂದು ನಿರ್ಧರಿಸುವರು. ಮಾದಿಗ ಸಮುದಾಯದ ವ್ಯಕ್ತಿ ಹಬ್ಬದ ವಾತಾವರಣವನ್ನು ಊರಲ್ಲಿ ಡಂಗುರದ ಮೂಲಕ ಸಾರುತ್ತಾ ಅಂದಿನಿಂದ ಊರಿನಲ್ಲಿ ಯಾರೂ ಹೊಸ ಬಟ್ಟೆ ಉಡುವಂತಿಲ್ಲ. ಪೊರಕೆಯಿಂದ ಕಸ ಗೂಡಿಸುವಂತಿಲ್ಲ. ಬದಲಾಗಿ ಬಟ್ಟೆಯಿಂದಲೇ ಗೂಡಿಸಬೇಕು. ಈ ನಿಯಮಗಳನ್ನು ಈಗಲೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ ಮಂಗಳವಾರದ ಸಮೀಪಿಸುವ ವೇಳೆಗೆ ಊರಲ್ಲಿ ಮನೆಗಳಿಗೆ  ದೇವಾಲಯಕ್ಕೆ ಸುಣ್ಣ, ಬಣ್ಣ ಬಳಿದು ಶುಚಿಗೊಳಿಸಿ ಊರಿಗೆ ಊರೇ ಜಾತ್ರೆಗೆ ಸಿದ್ಧವಾಗುತ್ತದೆ. ಮಾರಮ್ಮಳ ಗುಡಿಯ ಬಳಿ ಹಳ್ಳಿಯ ಜನರು ಬಹುಪಾಲು ಮ್ಯಾಸ ನಾಯಕರು ಬಂದು ಸೇರುತ್ತಾರೆ.

**ನುಂಕೆ ಮಲೆ ಭೈರವ ಮತ್ತು ವಿವಿಧ ಜನ ಸಮುದಾಯಗಳು**

ನುಂಕೀಮಲೆ ಭೈರವನನ್ನು ವಿವಿಧ ಸಮುದಾಯಗಳು ತಮ್ಮ ಮನೆ ದೇವರೆಂದು ಪೂಜಿಸುವ ಪದ್ಧತಿಯುಂಟು. ಹೆಚ್ಚಾಗಿ ಮೊಳಕಾಲ್ಮೂರು ಸೇರಿದಂತೆ ಸುತ್ತಮುತ್ತಲು ಹಳ್ಳಿಗಳ ಭಕ್ತಾಧಿಗಳಲ್ಲಿ ಮ್ಯಾಸಬೇಡ ಸಮುದಾಯವು ಹೆಚ್ಚಿನದಾಗಿ ಕಂಡು ಬರುತ್ತಾರೆ. ತಮ್ಮ ಮನೆ ದೇವರೆಂದು ನಡೆದುಕೊಳ್ಳುವ ನುಂಕಪ್ಪ ಸಿದ್ದಣ್ಣ, ನುಂಕಮ್ಮ, ಭೈಯಣ್ಣ ಎಂಬ ಹೆಸರುಗಳನ್ನು ಹೊಂದಿರುತ್ತಾರೆ. ಪ್ರಧಾನ ಸಂಸ್ಕೃತಿಗೆ ಮುಖಾಮುಖಿಯಾಗಿ ಪ್ರತಿ ಸಂಸ್ಕೃತಿಗಳಾದ ಮಾದಿಗ, ಮ್ಯಾಸಬೇಡ ಸಂಸ್ಕೃತಿಗಳು ಕಂಡು ಬರುತ್ತವೆ. ಮ್ಯಾಸಬೇಡರು ಸಿದ್ದು ಭಕ್ತಿಯೆಂದು ವಿಶೇಷವಾಗಿ ಆಚರಿಸುವುದುಂಟು. ಹರಿಜನ ಸಮುದಾಯವನ್ನು ಇಲ್ಲಿ ಹರಿಜನ ಎಂದು ಕರೆಯದೆ 'ಗೊರವರು' ಎಂದು ಕರೆಯುವ ವಾಡಿಕೆಯಿದೆ. ಇವರಿಗೆ ಜಾತ್ರೆಯಲ್ಲಿ ವಿಶೇಷವಾದ ಮಾನ ಮರ್ಯಾದೆಗಳು ಸಲ್ಲುತ್ತವೆ. ನಾಥಪಂಥ ಚಿತ್ರದುರ್ಗ ಪಾಳೇಗಾರರ ಪೂರ್ವಕಾಲಕ್ಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಹಾಗೂ ನಂತರ ದಿನಗಳಲ್ಲಿಯೂ ಕೂಡಾ ಪಾಳೆಗಾರರು ನಾಥಪಂಥದ ಜೋಗಿ ದೀಕ್ಷೆ ಪಡೆದು ವರ್ಷಕ್ಕೊಂದು ಸಾರಿ ಜೋಗಪ್ಪನ ವೇಷ ಧರಿಸಿ ಭಿಕ್ಷಾಟನೆಗೆ ಹೋಗುತ್ತಿದ್ದುದು ತಿಳಿದು ಬರುತ್ತದೆ.[೯]

ಸದರಿ ಮಠಕ್ಕೆ ಸೇರಿದ ಕಿನ್ನರಿ ಜೋಗಿಗಳಿಗೆ ನುಂಕೆಮಲೆಯ ಮಠದಿಂದ ಭಿಕ್ಷಾಟನೆಗಾಗಿ ಹಕ್ಕು ಪತ್ರ ಕೊಟ್ಟು ಕಳಿಸುವರು. ಕಿನ್ನರಿ ಜೋಗಿಗಳು ಪ್ರತಿವರ್ಷ ಜಾತ್ರೆಯ ವೇಳೆಗೆ ಮಠಕ್ಕೆ ಕಾಣಿಕೆ ಒಪ್ಪಿಸುವರು. ನಾಯಕನಹಟ್ಟಿ ಇರುವ ದೇವರಹಳ್ಳಿಯ ವೃತ್ತಿ ಗಾಯಕ ಕಿನ್ನರಿ ಜೋಗಿಗಳ ಒಂದು ಪಡೆಯೇ ಇದೆ. ವಿಶೇಷವೆಂದರೆ ಜಾತ್ರೆಯ ದಿವಸ ಇಲ್ಲಿಯೂ ಕಾಣಿಕೆ ಸಿಗುವುದಿಲ್ಲ.

ತೇರು ಹರಿಯುವ ಸಂದರ್ಭದಲ್ಲಿ ನಾಲ್ಕು ಗಾಲಿಗಳಿಗೂ ಹಾಕಿದ ಬಲಿ ಅನ್ನವನ್ನು

ಮ್ಯಾಸಬೇಡರು ಹರಿಜನರು, ಮಡಿವಾಳರು ಆಚಾರಿಗಳು ತೆಗೆದುಕೊಳ್ಳುವ ಪದ್ಧತಿಯುಂಟು. ಜೋಗಪ್ಪನು(ಆದಿಚುಂಚನಗಿರಿ) ಭೈರವನ ಒಕ್ಕಲುಗಳಿಗೆ ಈ ದೈವ ಸಂಬಂಧಿಯಾದ ಆಚರಣೆಗಳನ್ನು ಹರಕೆಗಳನ್ನು ನೆರವೇರಿಸುವ ಶೈವ ಪೂಜಾರಿ ಎಂಬ ಪದವು ಇವರ ಕಾರ್ಯಸ್ವರೂಪವನ್ನು ನಿಜವಾಗಿಯೂ ಪ್ರತಿನಿದಿಸುವುದಿಲ್ಲ.ಜೋಗಪ್ಪರನ್ನು ದೈವ ಹಾಗೂ ಭಕ್ತರ ನಡುವಣ ಸಂಪರ್ಕದ ವ್ಯಕ್ತಿಗಳು ಎನ್ನಬಹುದು. ಪ್ರಮುಖ ಧಾರ್ಮಿಕ ಸಂಪ್ರದಾಯಗಳು ಮಧ್ಯಕರ್ನಾಟಕದಲ್ಲಿ ಅದರಲ್ಲಿ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರನ ನುಂಕೆಮಲೆಯ ಬೆಟ್ಟದಲ್ಲಿ ಈಗಲೂ ಜೀವಂತವಾಗಿವೆ. ಇವರ ದೈವ ಸಂಪ್ರದಾಯಗಳನ್ನು ಅಥವಾ ಕಲ್ಟುವಗಳನ್ನು ಅವುಗಳ ಮೇಲು ತುದಿಯಲ್ಲಿರುವ ವ್ಯಕ್ತಿಗಳ ಮೂಲಕವಲ್ಲ. ಆದರೆ ಕೆಳಹಂತದಲ್ಲಿ ಇರುವ ವ್ಯಕ್ತಿಗಳ ರಚಿಸಿರುವುದು ವಿಶಾಲತೆಯಲ್ಲಿ ದಾಸಪ್ಪ, ಜೋಗಪ್ಪರನ್ನು ಜನಪದ ದೈವ ಸಂಪ್ರದಾಯದಲ್ಲಿ ಮಲೆಮಾದೇಶ್ವರ ದೇವರಗುಡ್ಡರು, ಮಂಟೇಸ್ವಾಮಿ, ನೀಲಗಾರರು, ಮೈಲಾರನಗೊರುವರು, ಎಲ್ಲಮ್ಮನಜೋಗಪ್ಪ ಮತ್ತು ಜೋಗಮ್ಮ ಇವರ ಸಾಲಿನಲ್ಲಿ ಇವರನ್ನು ಸೇರಿಸಬಹುದು. ಆದರೂ ಇವರ ಪಾತ್ರವನ್ನು ಸೂಫಿಪಂಥದ ಪಕೀರರಿಗೆ ಹೆಚ್ಚು ಹೋಲುತ್ತದೆ. ಅದರಲ್ಲಿ ನಾಥಪಂಥದ ಸಾಮುದಾಯಿಕ ರೂಪ ವಾದ ಜೋಗಪ್ಪ ಸಂಪ್ರದಾಯವು ಫಕೀರರ ಹಾಗೆ ಗುರು ಸಂಪ್ರದಾಯಕ್ಕೆ ಸೇರಿದ್ದು.

### ಗಾದ್ರಿಪಾಲನಾಯಕನ ಹಿನ್ನೆಲೆ

ಗಾದ್ರಿಪಾಲನಾಯಕ ಎಂಬ ದೈವ ಮ್ಯಾಸಬೇಡರಲ್ಲಿದೆ. ಈತನನ್ನು ತಮ್ಮ ವಂಶದ ಮೂಲ ಪುರುಷ. ಅವತಾರಿ, ಧಾರ್ಮಿಕ ಮಹಾಪುರುಷನೆಂದು ಅವರು ನಂಬಿದ್ದಾರೆ. ವಾಸ್ತವವಾಗಿ ಗಾದರಿ ಪಾಲನಾಯಕನು ಹುಲಿಯನ್ನು ಕೊಂದು ಸಾಂಸ್ಕೃತಿಕವೀರ ಎಂಬುದು ಸ್ಪಷ್ಟ. ‘ಗಾದರಿ’ ಎನ್ನುವ ಹೆಸರು ಚರಿತ್ರೆಯಲ್ಲಿ ಮತ್ತು ಜನಪದ ಸಾಹಿತ್ಯದಲ್ಲಿ ಕಂಡು ಬರುವುದು. ಅಪರೂಪ. ಗಾದರಿ ಎನ್ನುವುದು ಬಹುಶಃ ತೆಲುಗು ಪದವಿರಬೇಕು. ಗೋವುಗಳನ್ನು ಕಾಯುವವರಿಗೆ ಗಾದರಿಪಾಲನಾಯಕ ಎಂದು ಕರೆದಿರಬೇಕು. ಗಾದರಿ ಎನ್ನುವುದ ಅರೆಮಲೆನಾಡಿನ ಒಂದು ಕಿರುಘಟ್ಟಪ್ರದೇಶ. ಅದಕ್ಕೆ ‘ಗಾದರಿಘಟ್ಟ’ ‘ಗಾದರಿಗುಡ್ಡ’ ‘ಗಾದ್ರಿಮಲೈ’ ಮುಂತಾದ ಹೆಸರುಗಳಿಂದ ಕರೆಯುವರು..ಈ ಸ್ಥಳಕ್ಕೆ ಪಶುಪಾಲನೆ ಮಾಡಲು ಬಂದ ಪಾಲಯ್ಯ ಎಂಬ ಹೆಸರಿನ ವ್ಯಕ್ತಿಗೆ ಮುಂದೆ ಗಾದ್ರಿಪಾಲನಾಯಕ ಎಂದು ಕರೆದಿರಬೇಕು. ಹೀಗಾಗಿ ಈ ಹೆಸರಿನ ವ್ಯಕ್ತಿ ಸಿಗುವುದು ಮ್ಯಾಸಬೇಡರ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಾತ್ರ. ಟಿ.ಎನ್.ಗಂಡುಗಲಿ ತಿಳಿಸುವಂತೆ ಮಲ್ಲಿನಾಥನ ವಿಜಯನಗರದ ಪ್ರತಿನಿಧಿಯಾಗಿ ಆಳಿದ ಕಾಲದಲ್ಲಿ ಸಿದ್ಧ ಸಂಪ್ರದಾಯ ಪದಾಧಿಕಾರಿಗಳು ಈ ಕಾಲದಲ್ಲಿಯೇ ಹೊಸದುರ್ಗದ ಆಸುಪಾಸಿನ ಬೆಟ್ಟಗಳಲ್ಲಿ ಚಿಕ್ಕದಾಸ ಕದರಿ ಪೀಠವನ್ನು ಸ್ಥಾಪಿಸಿಕೊಂಡಿದ್ದರಿಂದ ಕದರಿ–ಮಲೆ ಕಾದ್ರಿಮಲೆ ಅಥವಾ ಗಾದ್ರಿಮಲೆ ಎಂಬ ಹೆಸರು ಪ್ರಾಪ್ತವಾಯಿತು. ಹಿರೇಮದು ಕರಿನಾಯಕನ ತಾರಾವಳಿಯಲ್ಲಿ (೧೭೨೧–೧೭೪೮) ದಂಡೆತ್ತಿ ಬರುವೊ ಬಿರುದಿನ ದೊರೆ ರಾಯನ್ಯಾರಮ್ಮ ಗಂಡು ಗಾದರಿ ಮದುಕರಿ ಗಾದರಿ

ಹೆಬ್ಬುಲಿಯಾ ಎಂಬ ಸಂಗತಿ ತಿಳಿದು ಬರುತ್ತದೆ. ಇಲ್ಲಿ ಗಾದರಿ ಎಂಬುದು ಅಪ್ರತಿಮ ಸಾಹಸಿಗೆ ಕೊಡುವ ಬಿರುದಾಗಿರಬೇಕು. ಇವನು ಒಬ್ಬ ಪುರಾಣ ವ್ಯಕ್ತಿಯೋ ಅಥವಾ ಐತಿಹಾಸಿಕ ವ್ಯಕ್ತಿಯೋ ಎಂಬ ಊಹೆಗೆ ಅಥವಾ ಸಂಶಯಕ್ಕೆ ಇವನ ಬಗೆಗೆ ಪ್ರಚಲಿತವಿರುವ ಕಥೆ ಕಾವ್ಯ ಮತ್ತಿತರ ಜಾನಪದ ಸಾಹಿತ್ಯದ ಪ್ರಕಾರಗಳಲ್ಲಿ ಅವತಾರ ಪುರುಷನಾಗಿ ಕಂಡು ಬಂದರೂ ಐತಿಹಾಸಿಕ ವ್ಯಕ್ತಿಯೆಂಬುದು ಗಮನೀಯ ಸಂಗತಿ.[೧೦]

**ಗಾದ್ರಿಪಾಲನಾಯಕನ ಜಾತ್ರೆ**

ಬಹುತೇಕ ಮಳೆ ಬೆಳೆ ಚೆನ್ನಾಗಿ ಆದಾಗ ಜನತೆಯ ಕೈಗೆ ಹೆಚ್ಚು ಹಣ ದೊರೆತಾಗ ಇಂತಹ ಜಾತ್ರೆಗಳನ್ನು ಮೂರು ನಾಲ್ಕು ವರ್ಷಗಳಿಗೊಮ್ಮೆ ಆಚರಿಸುವುದನ್ನು ಕಾಣುತ್ತೇವೆ. ಇದರಂತೆ ಗಾದ್ರಿಪಾಲನಾಯಕನ ದೊಡ್ಡ ಜಾತ್ರೆಯನ್ನು ಗಂಜಿಗಟ್ಟೆಯ ಸುತ್ತಮುತ್ತಲಿನ ಜನರು ಸೇರಿ ಮಿಂಚೇರಿ ಅರಣ್ಯದಲ್ಲಿ ಪ್ರತಿ ಐದು ವರ್ಷಗಳಿಗೊಮ್ಮೆ ನೆರವೇರಿಸುತ್ತಾರೆ. ಮಿಂಚೇರಿ ಸುತ್ತಮುತ್ತಲಿನ ಜನತೆ ಗಂಜಿಗಟ್ಟೆ ಗ್ರಾಮದಲ್ಲಿ ಪಂಚಾಯ್ತಿಗೆ ಸೇರಿ ಜಾತ್ರೆಯನ್ನು ನಡೆಸುವುದರ ಬಗ್ಗೆ ಆಲೋಚಿಸಿ ಒಮ್ಮತದಿಂದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ. ಈ ಜಾತ್ರೆ ಕೇವಲ ಮ್ಯಾಸಬೇಡರಿಗೆ ಸೀಮಿತವಾಗಿರುವುದಿಲ್ಲ. ಎಲ್ಲ ಜಾತಿಯ ಜನರೂ ಈ ಜಾತ್ರೆಯಲ್ಲಿ ಭಾಗವಹಿಸಿ ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಅಲ್ಲದೇ ಈ ಜಾತ್ರೆಗೆ ಚಿತ್ರದುರ್ಗ ತಾಲೂಕಿನ ಬಚ್ಚು ಬೋರನಹಟ್ಟಿ, ಚಳ್ಳಕೆರೆ ತಾಲೂಕಿನ ನನ್ನಿವಾಳ ಮುಂತಾದ ಪ್ರದೇಶಗಳಲ್ಲಿ ಜನರು ಎತ್ತಿನ ಬಂಡಿಗಳೊಂದಿಗೆ ಮಿಂಚೇರಿ ಅರಣ್ಯಕ್ಕೆ ಬರುತ್ತಾರೆ. ಒಂದು ವಾರ ಅಂದರೆ ಜಾತ್ರೆ ಮುಗಿಯುವ ವರೆಗೂ ಇಲ್ಲದ್ದು ಪರ್ವ ಮಾಡುವುದನ್ನು ಕಾಣಬಹುದು ಅಲ್ಲದೇ ಇಲ್ಲಿ ವಿಶಿಷ್ಟವಾದ ಕೆಲವು ಆಚರಣೆಗಳಿರುವುದನ್ನು ಕಾಣುತ್ತೇವೆ.

ದೇವರಜೋಗತಿ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನಲ್ಲಿದೆ. ದೇವರಗಂಜಿಗಟ್ಟೆ ಎಂದು ಪ್ರಸಿದ್ಧಿ ಪಡೆದಿದೆ. ೧೦೧ ಲಿಂಗಗಳನ್ನೊಳಗೊಂಡ ಈ ಗ್ರಾಮ ಧಾರ್ಮಿಕ ಕೇಂದ್ರವಾಗಿದೆ. ಗಾದ್ರಿಪಾಲನಾಯಕ ಕೇವಲ ಬುಡಕಟ್ಟು ಸಮುದಾಯದವರಿಗೆ ಮಾತ್ರ ಸೀಮಿತವಾಗಿದೆ. ಎಲ್ಲಾ ಸಮುದಾಯಗಳಿಗೂ ಬೇಕಾದವ ಸಾಮಾನ್ಯವಾಗಿ ಹಬ್ಬ ಹರಿದಿನಗಳಲ್ಲಿ ಎಲ್ಲ ಜಾತಿಯವರು ಒಂದಾಗಿ ಗಾದ್ರಿಪಾಲನಾಯಕನ ಆಚರಣೆಗಳಲ್ಲಿ ತೊಡಗುವುದನ್ನು ಇಲ್ಲಿ ಕಾಣಬಹುದು. ಈ ಬುಡಕಟ್ಟಿನ ದೇವರ ಗುಡಿಗಳು ತಮ್ಮ ವಾಸದ ಗುಡಿಸಲು(ಗುಡ್ಲ) ಗಳಂತೆ ಬಿದಿರು ಹುಲ್ಲುಗಳಿಂದ ನಿರ್ಮಿತವಾಗಿರುವುದನ್ನು ಕಾಣುತ್ತೇವೆ. ಈ ವೀರರ ಗುಡಿಗಳು ಇನ್ನೂ ಮೂಲಸ್ಥಿತಿಯಲ್ಲಿವೆ. ಪೂಜಾರಿಹಳ್ಳಿ ಗಾದ್ರಿಪಾಲನಾಯಕ ನನ್ನಿವಾಳ, ರಾಮಸಾಗರದ ಮತ್ತು ಗೊಂಬೆಹಳ್ಳಿಯ ದೇವಸ್ಥಾನಗಳಿಗೂ ಇನ್ನೂ ಮೂಲಸ್ಥಿತಿಯಲ್ಲಿವೆ. ಆಧುನಿಕ ದೇವಾಲಯದ ಕಟ್ಟಡಗಳಿಗಿಂತ ತಲೆ ತಲಾಂತರಗಳಿಂದ ಕಟ್ಟಿದ ಮೂಲ ಬಿದಿರುಹುಲ್ಲು ಗುಡಿಗಳೇ ಶ್ರೇಷ್ಠವೆಂಬುದು ಸಾಂಪ್ರದಾಯಿಕ ಮ್ಯಾಸಬೇಡರ ಅಭಿಪ್ರಾಯವಾಗಿದೆ.

ಆದರೆ ಗಂಜಿಗಟ್ಟೆಯ ಗಾದ್ರಿಪಾಲನಾಯಕನ ದೇವಾಲಯ ಆಧುನಿಕ ಕಟ್ಟಡದಂತಿದೆ. ಈ ದೇವಾಲಯದ ಒಳಗಡೆ ಗಾದ್ರಿಪಾಲನಾಯಕನ ಏಕಶಿಲೆ ಇದೆ. ಇದರಲ್ಲಿ ಗಾದ್ರಿಪಾಲನಾಯಕನ ಸತಿಯರಾದ ಕೆಂಚವ್ವ, ಕಾಮವ್ವ, ಮತ್ತು ಕೋರಲಪಾಲನಾಯಕ, ಚಿನ್ನಪಾಲನಾಯಕ, ಒಂದು ಹಸು ಮತ್ತು ಹುಲಿಯ ಚಿತ್ರವನ್ನು ಇಲ್ಲಿ ಕಾಣಬಹುದು. ಗುಡಿಯ ಸುತ್ತ ಕಲ್ಲಿನ ಗೋಡೆ ಇದೆ.ಇದರ ಹೊರಗಡೆ ೧೨-೧೪ ಅಡಿ ಎತ್ತರ ಇರುವ ದೀಪಸ್ಥಂಭವಿದೆ. ಮತ್ತು ದೇವಸ್ಥಾನದ ಮುಂದೆ ಹೊಂಡವಿದೆ.ಇದರಲ್ಲಿ ಗಾದ್ರಿಪಾಲನಾಯಕನು ಹೋರಾಡಿ ಮರಣ ಹೊಂದಿದ. ನಂತರ ಈ ಹೊಂಡದಲ್ಲಿ ಕೆಂಚವ್ವ, ಕಾಮವ್ವ, ಅಗ್ನಿಕುಂಡವಾದರೆಂದು ಹಿರಿಯರು ಅಭಿಪ್ರಾಯ ಪಡುತ್ತಾರೆ. ಗಂಜಿಗಟ್ಟೆಯಿಂದ ಸುಮಾರು ೩-೪ ಕಿ.ಮೀ ದೂರದಲ್ಲಿ ಮಿಂಚೇರಿ ಹಳ್ಳವಿದೆ.ಇದೊಂದು ಮಹತ್ವಪೂರ್ಣವಾದ ಸ್ಥಳವಿದೆ. ಇದು ಗಾದ್ರಿಪಾಲನಾಯಕನ ನೆಲೆಗೊಂಡು ಸಮಾಧಿಯಾಗಿರುವ ಸ್ಥಳ. ಇವನ ಸಮಾಧಿಯನ್ನು ನೋಡಲು ಹೋದವರು ಒಂದೊಂದು ಕಲ್ಲನ್ನು ಹಾಕಿರಬೇಕೆಂಬ ನಂಬಿಕೆ ಇದೆ. ಕಾರಣ ಈ ಸಮಾದಿಗಳು ಅಳಿಯದೇ ಇರಬೇಕೆಂಬ ಉದ್ದೇಶವಿರಬಹುದು.

ಮಿಂಚೇರಿಯಲ್ಲಿ ಗಾದ್ರಿಪಾಲನಾಯಕನ ಗುಡ್ಡ ಮತ್ತು ಹಸುವಿನ ಗುಡ್ಡೆಯನ್ನು ಮಾತ್ರ ಪೂಜಿಸುತ್ತಾರೆ. ಹುಲಿಯ ಗುಡ್ಡವನ್ನು ಪೂಜಿಸುವುದಿಲ್ಲ. ಅಲ್ಲದೇ ವಿಶೇಷ ಸಂದರ್ಭಗಳಲ್ಲಿ (ಹಬ್ಬ ಜಾತ್ರೆಗಳಲ್ಲಿ) ಕೆಂಚವ್ವ ಕಾಮವ್ವರು ಮಜ್ಜಿಗೆ ಕಡಿಯಲು ಉಪಯೋಗಿಸುತ್ತಿದ್ದ ಮರವನ್ನು ಪೂಜಿಸುತ್ತಾರೆ. ಈ ಮರಕ್ಕೆ ಬೇರೆ ಯಾವುದೇ ಹೆಸರು ಇರುವಂತೆ ಕಾಣುವುದಿಲ್ಲ. ಆದ್ದರಿಂದ ಈ ಮರವನ್ನು 'ಕಡಗಲ್ ಮರ' ಎಂದು ಕರೆಯುತ್ತಾರೆ.

ಮ್ಯಾಸಬೇಡರು ಇತರೆ ಬುಡಕಟ್ಟಿನವರು ಆಚರಿಸುವ ಹಬ್ಬ ಜಾತ್ರೆಗಳನ್ನು ಆಚರಿಸುತ್ತಾರೆ. (ಕಾಳವ್ವನ ಹಬ್ಬ) ಈ ಹಬ್ಬವನ್ನು ಬಹುತೇಕ ಹಟ್ಟಿಗಳಲ್ಲಿ ಆಚರಿಸುತ್ತಾರೆ. ಕಾಡುಗೊಲ್ಲರು ಸಹ ಈ ಹಬ್ಬ ಆಚರಿಸುವುದನ್ನು ಕಾಣಬಹುದು. ಪಶುಪಾಲನೆಯ ಜೊತೆಗೆ ವ್ಯವಸಾಯವೂ ಇವರಿಗೆ ವೃತ್ತಿಯಾಗಿದೆ. ವ್ಯವಸಾಯದಲ್ಲಿ ತೊಡಗಿದ ಇವರು ತಮ್ಮ ಹೊಲದಲ್ಲಿ ಅಲಸಂದೆ, ಹುರಳಿ, ಹೆಸರು ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. (ಬಹುತೇಕ ಗುಗ್ಗರಿಗಾಗಿ ) ಹುರಳಿಯನ್ನು ಬಳಸುವುದು ಈ ಹಬ್ಬ ಮಾಡುವವರಿಗೂ ಈ ಧಾನ್ಯಗಳನ್ನು ಆಹಾರಕ್ಕಾಗಿ ಬಳಸುವುದು ಇವರಲ್ಲಿ ನಿಷೇಧಿಸಲಾಗಿದೆ.

## ಟಿಪ್ಪಣಿಗಳು

೧. ಎಂ.ಜಿ. ಈಶ್ವರಪ್ಪ, ಮ್ಯಾಸ ಬೇಡರು, ಪು. ೭

೨. ಮ್ಯಾಸ ಬೇಡರು ಸಂಸ್ಕೃತಿ, ಪು. ೪ ಹಾಗೂ ೧೧೭, ೨೨೦

೩. ಮ್ಯಾಸ ಮಂಡಲ, ಪು. ೨೭, ೨೮ ಅದೇ, ೧೪, ೧೫, ೩೫, ೩೬

೪. ಮ್ಯಾಸ ಬೇಡರು ಹಾಗು ಕಾಡುಗಲ್ಲರು, ಬುಡಕಟ್ಟುಗಳು, ಪು. ೧೮೧

೫. ಕಾಮಗೇತಿ ವಂಶ, ಚರಿತೆ, ಪು. ೩೪, ೪೩

೬. ಕರ್ನಾಟಕದ ನಾಥ ಪಂಥ, ಪು. ೩೦೯

೭. ಗಾದ್ರಿಪಾಲನಾಯಕ, ಪು. ೧೦, ೧೧

೮. ಕರ್ನಾಟಕದ ಬುಡಕಟ್ಟುಗಳ ವಿಸ್ತೃತ ಅಧ್ಯಯನ, ಪು. ೧೦೮

೯. ಮ್ಯಾಸನಾಯಕರು ಒಂದು ಜನಾಂಗಿಯ ಅಧ್ಯಯನ, ಪು. ೬೮, ೭೦

# ಅಧ್ಯಾಯ ಮೂರು

# ಜಗಳೂರು ಪಾಪನಾಯಕ ಮತ್ತು ಮ್ಯಾಸಬೇಡರು

ಮ್ಯಾಸಬೇಡರ ಸಾಂಸ್ಕೃತಿಕ ವೀರ ಜಗಳೂರ ಪಾಪನಾಯಕ. ಈ ಸಾಂಸ್ಕೃತಿಕ ವೀರನ ಆರಾಧನೆಯನ್ನು ಅನಾದಿಕಾಲದಿಂದಲೂ ಮಾಡುತ್ತಾ ಬಂದಿದ್ದಾರೆ.

ಜನಾಂಗದ ಮುಖ್ಯಸ್ಥರು ಹಿರಿಯರು, ನಾಯಕರು, ವೀರರು ಮುಂತಾದವರ ಲೌಕಿಕ ಜೀವನದಲ್ಲಿ ಪ್ರಭಾವಶಾಲಿಗಳಾಗಿರುವ ವ್ಯಕ್ತಿಗಳು, ಸತ್ತ ನಂತರವೂ ತಮ್ಮ ಪ್ರಭಾವವನ್ನು ಉಳಿಸಿಕೊಳ್ಳುತ್ತಾರೆ. ವೀರರ ಭೌತಿಕ ದೇಹ ನಶಿಸಿ ಹೋಗಿದ್ದರೂ ಅವರ ಆತ್ಮ ಬದುಕಿರುವ ತಮಗೆ ಒಳ್ಳೆಯದನ್ನು ಅಥವಾ ಕೆಟ್ಟದ್ದನ್ನು ಮಾಡುವ ಶಕ್ತಿಯನ್ನು ಪಡೆದಿದೆ ಎಂಬ ನಂಬಿಕೆ ಇದೆ. ಸತ್ತ ಹಿರಿಯರನ್ನು ಮುಂದಿನ ಪೀಳಿಗೆಯವರು ಸ್ಮರಿಸಬೇಕು ಎಂಬ ಭಯ ಮಿಶ್ರಿತ ಕೃತಜ್ಞತಾ ಭಾವ ಮತ್ತು ತಮ್ಮ ಮನೆಯಲ್ಲೆ ಪುನರ್‌ಜನ್ಮವೆತ್ತಿ ಬರುತ್ತಾರೆ ಎಂಬ ಕಲ್ಪನೆಯೇ ಅವರನ್ನು ಆರಾಧಿಸುವಂತೆ ಮಾಡಿದೆ.) ಈ ದೃಷ್ಠಿಯಿಂದಲೇ ಪ್ರತಿ ವರ್ಷಕ್ಕೊಮ್ಮೆ ಹಿರಿಯರ ಹಬ್ಬವನ್ನು ಅವರ ಸ್ಮರಣೆಗಾಗಿ ಮಾಡುತ್ತಾರೆ.

(ಜಗಳೂರಜ್ಜ ಒಬ್ಬ ವೀರ ತನ್ನ ವಾಸ್ತವ ಬದುಕಿನಲ್ಲಿ ಅಸಾಮಾನ್ಯವಾದ ರೀತಿಯಲ್ಲಿ ಧೈರ್ಯ, ಸಾಹಸಗಳನ್ನು ಪ್ರದರ್ಶಿಸಿ ಸಹಜ ಮರಣವನ್ನು ಹೊಂದಿದ್ದಕ್ಕಾಗಿ ಆತನು ನಡೆಸಿದ ಹೋರಾಟ ಪ್ರತಿಭಟನೆಗಳಿಂದ ಮ್ಯಾಸ ಬೇಡರಲ್ಲಿ ಜಗಳೂರಜ್ಜನನ್ನು ಪೂಜ್ಯ ಭಾವನೆಯಿಂದ ಇಂದು ಸಹ ಕಾಣುವುದನ್ನು ನೋಡಬಹುದು. ಜಗಳೂರು ಪಾಪನಾಯಕ ಮೊದಲು ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದ ಕಾಲಂತರದಲ್ಲಿ ಇವನು ಅಸಾಧಾರಣವಾಗಿ ಮೆರೆದ ಪವಾಡಗಳನ್ನು, ಮಹಿಮೆಗಳನ್ನು, ಅವತಾರಗಳನ್ನು, ಆತನ ಶೂರತ್ವವನ್ನು ಕಥನ ಗೀತೆಗಳ ಮತ್ತು ಸೋಬಾನೆ ಪದಗಳ ಮೂಲಕ ಆತನನ್ನು ಕುರಿತು ವೈಭವೀಕರಿಸಿ ಹೇಳಿದಾಗ ಮ್ಯಾಸಬೇಡ ಸಮುದಾಯದವರು ನಮ್ಮಲ್ಲಿ ಇಂತಹ ಅಸಾಮಾನ್ಯ ಸಾಹಸಿ ಇದ್ದಾನೆ ಎಂದು ನಂಬಿ ಪೂಜ್ಯನೀಯ ಭಾವನೆಯಿಂದ ಕಾಣುತ್ತಾರೆ.) ೨೧ನೇ ಶತಮಾನದಲ್ಲಿ ಜಗಳೂರ ಪಾಪನಾಯಕನಿಗೂ ಮ್ಯಾಸಬೇಡರಿಗೂ ಏನು ಸಂಬಂಧ? ಜಗಳೂರಜ್ಜ ೧೨ನೇ ಶತಮಾನದಲ್ಲಿ ಪವಾಡ ಪುರುಷನಾಗಿದ್ದಂತಹ ವ್ಯಕ್ತಿ. ಆದರೆ ಇಂದೂ ಸಹ ಆತನನ್ನು ಪೂಜ್ಯ ಭಾವನೆಯಿಂದ ಕಾಣಲು ಕಾರಣವೇನು ಎಂಬುದು ಮುಖ್ಯ. ಏಕೆಂದರೆ ಆತನ ಪವಾಡಗಳೇ ೨೧ನೇ ಶತಮಾನದಲ್ಲಿ ಅದು ಆಧುನಿಕತೆ ಹಾಗೂ ಜಾಗತೀಕರಣ ಯುಗದಲ್ಲಿಯೂ ಪೂಜ್ಯ

ಭಾವದಿಂದ ಕಾಣಲು ಕಾರಣವಾಗಿರಬೇಕು. ಜಗಳೂರಜ್ಜ ಮ್ಯಾಸಬೇಡರಿಗೆ ಪ್ರಭುವಾಗಿದ್ದಾನೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

( **ಜಗಳೂರಜ್ಜನ ಧಾರ್ಮಿಕ ಕೇಂದ್ರಗಳು**

೧. ಚಳ್ಳಕೆರೆಯ ಗೊರ್ಲಕಟ್ಟೆ ಬಳಿ ಜಗಳೂರು ಪಾಪನಾಯಕರ ಧಾರ್ಮಿಕ ಕೇಂದ್ರವಿದೆ.

೨. ಕಂಪಳ ದೇವರ ಹಟ್ಟಿಯಲ್ಲಿ ಪಾಪನಾಯಕನ ಧಾರ್ಮಿಕ ಕೇಂದ್ರವಿದೆ.

೩. ಜಗಳೂರಿನಲ್ಲಿ ಪಾಪನಾಯಕನ ಕೇಂದ್ರ ಕಂಡು ಬರುತ್ತದೆ.

ಈ ಮೂರು ಕೇಂದ್ರಗಳು ಜಗಳೂರು ಪಾಪನಾಯಕನ ಪ್ರಮುಖ ಧಾರ್ಮಿಕ ಕೇಂದ್ರಗಳಾಗಿ ಕಂಡು ಬರುತ್ತವೆ. ಒಂದೊಂದು ಕೇಂದ್ರದಲ್ಲಿ ಒಂದೊಂದು ತರಹದ ಆಚರಣೆಗಳು ಕಂಡು ಬರುವುದು ವಿಶೇಷವಾಗಿದೆ.)

ಮ್ಯಾಸಬೇಡರ ಸುಮಾರು ಎಪ್ಪತ್ತೇಳು ಹೆಚ್ಚು ಹಟ್ಟಿಗಳಲ್ಲಿ ಜಗಳೂರು ಪಾಪ ನಾಯಕನ ಗುಡಿಗಳಿವೆ.(ಪಾಪನಾಯಕನ ಸ್ಮರಣಾರ್ಥವಾಗಿ ವರ್ಷಕ್ಕೊಂದು ಹಬ್ಬವನ್ನು ಬೃಹತ್ ಪ್ರಮಾಣದಲ್ಲಿ ಜಾತ್ರೆಯ ಮೂಲಕ ಆಚರಿಸುತ್ತಾರೆ. ಜಗಳೂರಿನಲ್ಲಿ ಪಾಪಿದೇವರು ಚಳ್ಳಕೆರೆಯಲ್ಲಿ ಜಗಳೂರಜ್ಜ, ಎಂದೂ ಕಂಪಳ ದೇವರ ಹಟ್ಟಿಯಲ್ಲಿ ಸೂರ್ಯದೆನ್ನ ಪಾಪನಾಯಕ ಎಂದೂ ಕರೆಯುತ್ತಾರೆ. ಅಲ್ಲದೆ ಕಳ್ಳಪಾಪನಾಯಕನೆಂತಲೂ ಆರಾಧಿಸುತ್ತಾರೆ. ಚಳ್ಳಕೆರೆ, ಜಗಳೂರು, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಪಾಪನಾಯಕನ ಹಬ್ಬ ಮತ್ತು ಜಾತ್ರೆಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಅದರಲ್ಲೂ ಕಂಪಳದೇವರ ಹಟ್ಟಿಯಲ್ಲಿ ನಡೆಯುವುದು ವಿಶಿಷ್ಟವಾಗಿದೆ. ಜಗಳೂರು, ಚಳ್ಳಕೆರೆ ಮುಂತಾದ ಹಟ್ಟಿಗಳಲ್ಲಿ ಸಾಮಾನ್ಯವಾಗಿ ಹಬ್ಬ ಜಾತ್ರೆಗಳನ್ನು ಆಚರಿಸುವುದನ್ನು ಕಾಣಬಹುದು. ವಿಶೇಷವಾಗಿ ಈ ಹಬ್ಬ, ಜಾತ್ರೆಗಳನ್ನು ಕೃಷಿ ಸಮುದಾಯದವರು ಆಚರಿಸು ವುದು ಕಂಡು ಬರುತ್ತದೆ. ದೀಪಾವಳಿಯಲ್ಲಿ ಬೆಳೆಗಳು ಸಮೃ ದ್ಧವಾಗಿ ಪಸರಿಸುತ್ತವೆ. ಗುಗ್ಗರಿ ಹಬ್ಬವೆಂದರೆ ಕೃಷಿ ಸಮುದಾಯದ ಸುಗ್ಗಿಯ ಕಾಲವಾಗಿರುತ್ತದೆ. ಪ್ರಧಾನ ಹಬ್ಬಗಳಾದ ಯುಗಾದಿ, ಶಿವರಾತ್ರಿ, ದಿನಗಳಂದು ವಿಶೇಷ ಪೂಜೆ ಇಲ್ಲಿ ನಡೆಯುತ್ತದೆ. ಕೆಲವು ಕಟ್ಟುನಿಟ್ಟಿನ ನಿಯಮಗಳನ್ನು ಈ ಆಚರಣೆಗಳಲ್ಲಿ ಪಾಲಿಸುತ್ತಾರೆ. ಒಟ್ಟಾರೆ ಪಾಪನಾಯಕನನ್ನು ದೈವತ್ವಕ್ಕೇರಿಸಿ ವಿವಿಧ ರೀತಿಯ ಆಚರಣೆ ಪದ್ಧತಿಗಳಿಗೆ ಒಳಪಡಿಸಿಕೊಂಡಿದ್ದಾರೆ.

ಪಾಪನಾಯಕನು ಮಲ್ಲನಾಯಕನ ಬೆಡಗಿಗೆ ಸೇರಿದವನು. ಈ ಬೆಡಗಿನವರು ಅಂದರೆ ಪಾಪನಾಯಕನ ಬೆಡಗಿಗೆ ಸೇರಿದವರು. ೭೭ ಹಟ್ಟಿಗಳಲ್ಲಿ ವಾಸವಾಗಿದ್ದಾರೆ. ಇಂದಿಗೂ ಇವರೆ ಪ್ರಧಾನವಾಗಿ ಪಾಪನಾಯಕನ ಪೂಜಾರಿಗಳಾಗಿರುತ್ತಾರೆ. ಸಾಮನ್ಯವಾಗಿ ಪಾಪನಾಯಕನ ಪೂಜಾರಿ ಗಳಿಗೆ ಚಿಕ್ಕವರಿರುವಾಗಲೇ ಪಟ್ಟಕಟ್ಟುತ್ತಾರೆ. ಪೂಜಾರಿಯಾದವರು ಕಟ್ಟು-ನಿಟ್ಟಾಗಿ ಕೆಲವು ನಿಯಮಗಳನ್ನು

ಪಾಲಿಸಬೇಕು. ಸಾಮಾನ್ಯವಾದ ಉಡುಪನ್ನು ಧರಿಸಬೇಕು. ಒಂದು ಚಲ್ಲಣ ತಲೆಗೊಂದು ಮುಂಡ(ಪೇಟ) ಹೊದೆಯಲು ಒಂದು ಕರಿಕಂಬಳಿ ಕೈಳಿಯಲ್ಲಿ ಒಂದು ಕೋಲು, ಹಿಡಿದುಕೊಂಡಿರುತ್ತಾರೆ. ಕೆಲವು ವಿಶೇಷ ಕಾರ್ಯಕ್ರಮಗಳಲ್ಲಿ ಮೈತುಂಬ ಉಡುಪನ್ನು ಧರಿಸುತ್ತಾರೆ. ಇವರ ಊಟ ತಿಂಡಿ ಮುಂತಾದವು ಮನೆಯಲ್ಲಿಯೇ ನಡೆಯಬೇಕು. ಹೊರಗಡೆ ಊಟ ತಿಂಡಿ ಮಾಡುವಂತಿಲ್ಲ. ಮಧ್ಯಪಾನ ಮಾಡುವಂತಿಲ್ಲ. ದೂರ ಪ್ರಯಾಣ ಮಾಡುವಾಗ ಕೇವಲ ಹಣ್ಣುಗಳನ್ನು ಮಾತ್ರ ಸೇವಿಸಬೇಕು ಈ ಪದ್ಧತಿ ವಂಶಪಾರಂಪರ್ಯವಾಗಿ ಸಾಗುತ್ತದೆ. ಇನ್ನೊಂದು ವಿಶೇಷವೆಂದರೆ ಇವರು ತಲೆ ಕೂದಲನ್ನು ತೆಗೆಸುವಂತಿಲ್ಲ. ಹಾಗೆ ಜಡೆಯ ರೂಪದಲ್ಲಿ ಬಿಡಬೇಕು. ಪ್ರತಿ ಸೋಮವಾರ ಒಪ್ಪತ್ತಿನ ಊಟ ಮಾಡಿ ದೇವರನ್ನು ಪೂಜಿಸಬೇಕು. ಜಾತ್ರೆಗಳಲ್ಲಿ ಇವರ ಪಾತ್ರ ವಿಶಿಷ್ಟವಾಗಿರುತ್ತದೆ. ಈಗ ಪೂಜಾರಿಗಳು ಆಧುನಿಕತೆಯ ಪ್ರಭಾವದಿಂದಾಗಿ ತಲೆ ಕೂದಲನ್ನು ಬಿಡದೆ ಇರುವುದು ಕಂಡು ಬರುತ್ತದೆ. ಚಳ್ಳಕೆರೆಯಲ್ಲಿ ಅಜ್ಜ ಪರಮೇಶ್ವರನವರು ಪೂಜಿಸುತ್ತಾರೆ. ಕಂಪಳದೇವರ ಹಟ್ಟಿಯಲ್ಲಿ ಗೂನರು, ಜಗಳೂರಿನಲ್ಲಿ ಪರಮೇಶ್ವರಪ್ಪನವರು ಪೂಜಿಸುತ್ತಾರೆ. ಅಲ್ಲದೆ ಗಾದಪ್ಲನೋನು ಕುರುಬುಲನು, ಬುಡಿಕಾಟ್ಲನು, ಯುರಮಂಚಿ ಅಜ್ಜನನ್ನು ಈ ಏಳುಜನ ಬೆಡಗಿನವರು ಪ್ರಧಾನವಾಗಿ ಪಾಪನಾಯಕನ ಪೂಜಾರಿಗಳಾಗಿರುವುದು ಕಂಡು ಬರುತ್ತದೆ.

### ಚಳ್ಳಕೆರೆಯಲ್ಲಿ ಪಾಪನಾಯಕನ ಧಾರ್ಮಿಕ ಕೇಂದ್ರ

ಚಳ್ಳಕೆರೆ ನಗರಕ್ಕೆ ಸುಮಾರು ಎರಡು ಕಿ.ಮೀ. ದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿ "ಜಗಳೂರು ಪಾಪಜ್ಜ"ನ ಪುಣ್ಯ ಕ್ಷೇತ್ರವಿದೆ. ಇಲ್ಲಿ ಒಂದು ದೇವಸ್ಥಾನವಿದೆ. ಪ್ರತಿನಿತ್ಯ ಅನೇಕ ಭಕ್ತಾದಿಗಳು ಈ ಪುಣ್ಯ ಕ್ಷೇತ್ರಕ್ಕೆ ಬಂದು ಹೋಗುತ್ತಾರೆ. ಪಾಪನಾಯಕ ಬಾಲಕನಿದ್ದಾಗ ಏಳು ಹೆಡೆ ಸರ್ಪದ ದರ್ಶನವಿತ್ತ ಜಾಗದಲ್ಲಿ ದೇವಸ್ಥಾನ ನಿರ್ಮಿತವಾಗಿದೆ. ಅಂದಿನ ಹುತ್ತ ಇಂದಿಗೂ ಇದ್ದು ಅದನ್ನೇ ಪಾಪನಾಯಕನ ಸಂಕೇತವಾಗಿ ಪೂಜಿಸುತ್ತಾರೆ. ಆ ಹುತ್ತದ ಮೇಲೆ ಆಧುನಿಕ ಶೈಲಿಯಲ್ಲಿ ಮಂಟಪ ಕಟ್ಟಿರುವುದನ್ನು ಕಾಣುತ್ತೇವೆ. ಭಕ್ತಾದಿಗಳು ಬಂದಿಳಿಯಲು ಇತ್ತೀಚೆಗೆ ಇಲ್ಲಿ ಅನುಕೂಲ ಮಾಡಿಕೊಟ್ಟಿರುವುದನ್ನು ಕಾಣುತ್ತೇವೆ. ಇಲ್ಲಿ ನಡೆಯುವ ಕಾರ್ಯಕ್ರಮಗಳು ಹೀಗಿವೆ.

ಜಗಳೂರಜ್ಜನ ಪೂಜಾರಿಗಳು (ಈಗಿನ ಪೂಜಾರಿಗಳ ಹೆಸರು ಜಗಳೂರಯ್ಯ.) ಭಾನುವಾರ ಸಂಜೆ ದೇವಸ್ಥಾನಕ್ಕೆ ಹೋಗಿ ದೇವರನ್ನು ಶೃಂಗರಿಸುತ್ತಾರೆ. ಒದ್ದೊಪ್ಪತ್ತಿನ ಉಪವಾಸವಿರುವುದು ಈ ಸಂದರ್ಭದಲ್ಲಿ ಕಡ್ಡಾಯ. ಪ್ರತಿ ಸೋಮವಾರ ಅನೇಕ ಭಕ್ತಾದಿಗಳು ಬರುತ್ತಾರೆ. ಅಲ್ಲದೆ ಸುತ್ತಮುತ್ತಲಿನ ಹಟ್ಟಿಗಳ ಜನತೆ ಗಾಡಿಗಳ ಸಮೇತವಾಗಿ ಬಂದು ಪರ್ವನ್ನು ಮಾಡುತ್ತಾರೆ. ಇಲ್ಲಿ ಸಾವಿರಾರು ಭಕ್ತಾದಿಗಳು ಬಂದು ಸೇರುತ್ತಾರೆ. ಜಗಳೂರಜ್ಜನ ಹಬ್ಬ, ದಸರಾ ಸಂದರ್ಭದಲ್ಲಿ ವಿಶೇಷವಾಗಿ ಮಹಾನವಮಿಯಲ್ಲಿ ನಡೆಯುತ್ತದೆ. ಅಂಬು-ಹೊಡೆಯುವುದಕ್ಕಾಗಿ ಮಾತ್ರ ಬನ್ನಿಮರದ ಹತ್ತಿರ

ದೇವರು ಹೋಗುತ್ತದೆ. ಆಗ ವಿಶೇಷ ಪೂಜೆ ನಡೆಯುವುದನ್ನು ಅಲ್ಲಿ ಕಾಣಬಹುದು. ಪ್ರತಿ ಸೋಮವಾರದ ಒಂದು ವಿಶೇಷ ಜಾತ್ರೆಯಂತೆ ಜನ ಸೇರುವುದನ್ನು ಕಾಣುತ್ತೇವೆ. ಈ ದಿನ ಆಡಂಬರವಿಲ್ಲದ ಸರಳ ವಿವಾಹಗಳು ನಡೆಯುತ್ತವೆ. ಈ ದೇವರಿಗೆ ಮಾಂಸದ ಎಡೆ ಸಲ್ಲುತ್ತದೆ. ಕೋಳಿ ಹತ್ತಿರ ಬರುವಂತಿಲ್ಲ. ಕೋಳಿಯನ್ನು ಕಂಡರೆ ಪಾಪನಾಯಕ ಬೆಂಕಿ ಆಗುತ್ತಾನೆ ಎಂಬ ನಂಬಿಕೆ ಇದೆ. ಧಾನ್ಯಗಳಲ್ಲಿ ಎಲ್ಲಾ ವಿಧದ ಪದಾರ್ಥಗಳ ಎಡೆ ಸಲ್ಲುತ್ತದೆ. ಆದರೆ ನವಣೆ, ಮಾತ್ರ ನಿಷೇಧ ಕಾಡುಗೊಲ್ಲರಲ್ಲಿ ಸಹ ಇಂತಹ ನಂಬಿಕೆಯನ್ನು ಕಾಣಬಹುದು. ಪಾಪನಾಯಕ ಮ್ಯಾಸಬೇಡ ಸಮುದಾಯಕ್ಕೆ ಯಾವ ರೀತಿ ಮುಖಾ ಮುಖಿಯಾಗಿದ್ದಾನೆಂದರೆ ಅಂದರೆ ಪಾಪನಾಯಕ ಹಾವುಗಳ ಸಂಕೇತ. ಈ ಸಮುದಾಯದವರು ಹಾವು ಚೇಳುಗಳನ್ನು ಕಂಡರೆ ಪಾಪನಾಯಕನಿಗೆ ಮುಡುಪುಗಳನ್ನು ಕಟ್ಟಿಕೊಳ್ಳುತ್ತಾರೆ. ಇದನ್ನು ಸೋಮವಾರ ಬಂದು ದೇವರಿಗೆ ಒಪ್ಪಿಸುತ್ತಾರೆ. ಸಂತಾನ ಭಾಗ್ಯ ಇಲ್ಲದವರು, ಅನಾರೋಗ್ಯದಿಂದ ಬಳಲುತ್ತಿರುವವರು ಪ್ರತಿ ಸೋಮವಾರ ದೇವಸ್ಥಾನಕ್ಕೆ ಬರುತ್ತಾರೆ. ಸಂತಾನ ಭಾಗ್ಯ ಲಭಿಸಿದರೆ ಮಕ್ಕಳ ತಲೆಕೂದಲನ್ನು ತೆಗೆಸುವುದನ್ನು ಕಾಣುತ್ತೇವೆ. ಯುಗಾದಿಯಲ್ಲಿ ಸಮಸ್ತ ಜನರು ದೇವಸ್ಥಾನಕ್ಕೆ ಬಂದು ವಿಶೇಷ ಪೂಜೆ ಸಲ್ಲಿಸುತ್ತಾರೆ. ಅಲ್ಲದೆ ತಮ್ಮ ಮನೆ ದೇವರಿಗೆ ಸಂಬಂಧಪಟ್ಟವರು 'ಪರ್ವ'ವನ್ನು ಮಾಡುವುದನ್ನು ಕಾಣುತ್ತೇವೆ.

ಏಳು ಎಡೆ ಸರ್ಪವು ವಾಸ ಮಾಡುತ್ತಿದ್ದ ಹುತ್ತ ಇಂದಿಗೂ ಇದೆ. ಅಂದು ಪಾಪನಾಯಕ ಹುತ್ತದ ಸುತ್ತ ಮುಳ್ಳು ಬೇಲಿ ಹಾಕಿ ದನಕರುಗಳನ್ನು ಕೂಡುತ್ತಿದ್ದ ಸ್ಥಳ. ಆ ಹುತ್ತ ಇಂದು ಗಚ್ಚು ಗಾರೆಗಳಿಂದ ಆವೃತವಾಗಿ, ಪಾಪಜ್ಜನ ಶಿಲಾವಿಗ್ರಹದೊಂದಿಗೆ ಈ ದೇವಾಲಯ ಪ್ರಕೃತಿಯ ಮಡಿಲಲ್ಲಿ ಕಂಗೊಳಿಸುತ್ತದೆ. ಅತ್ಯಂತ ಪ್ರಾಚೀನವಾದ ಇರುವ ಒಂದು ಬೃಹದಾಕಾರದ ಆಲದ ಮರ ಇಲ್ಲಿ ಕಂಡು ಬರುತ್ತದೆ.

ಜಗಳೂರು ಪಾಪನಾಯಕನ ಧಾರ್ಮಿಕ ಕೇಂದ್ರಗಳಲ್ಲಿ ಮುಖ್ಯವಾಗಿ ಮೂರು ಸ್ಥಳಗಳು ಬರುತ್ತವೆ. ಈ ಸ್ಥಳಗಳಲ್ಲಿ ಜಾತ್ರೆ ಮತ್ತು ಹಬ್ಬಗಳು ಜರುಗುತ್ತವೆ. ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಭಕ್ತರು ನೆರೆದಿರುತ್ತಾರೆ. ಚಳ್ಳಕೆರೆ ಅಜ್ಜನ ಗುಡಿಯಲ್ಲಿ ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಭಕ್ತರು ಪೂಜೆಯನ್ನು ಮಾಡಿಸಿಕೊಂಡು ಹೋಗುತ್ತಾರೆ. ಜಗಳೂರು ದೇವಸ್ಥಾನವು ಕೆರೆಯ ಪಕ್ಕದಲ್ಲಿದೆ. ಆಧುನಿಕತೆಯ ಪ್ರಭಾವದಿಂದ ಇಲ್ಲಿ ಇಂದು ವಿಶಾಲವಾದ ದೇವಸ್ಥಾನವನ್ನು ಕಟ್ಟಿಸಲಾಗಿದೆ. ಈ ಕ್ಷೇತ್ರದಲ್ಲಿ ಎಲ್ಲಾ ಜನಾಂಗದವರು ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಇತರೆ ಸಮುದಾಯದವರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಇಲ್ಲಿ ಅಜ್ಜನ ಗುಡಿಯನ್ನು ಕಟ್ಟಲು ಸಹಾಯ ರೆಡ್ಡಿಯ ಜನಾಂಗದವರು. ಸಹಾಯ ಮಾಡಿದ್ದರೆ. ಜಗಳೂರಅಜ್ಜನಮೂರ್ತಿಯನ್ನು ಈಡಿಗ ಜನಾಂಗಕ್ಕೆ ಸೇರಿದವರು. ಮಾಹಿತಿ ಕೊಟ್ಟಿದ್ದಾರೆ. ಪ್ರಸ್ತುತ ದಿನಗಳಲ್ಲಿ ಭಕ್ತಾದಿಗಳ ಸಂಖ್ಯೆ ಹೆಚ್ಚಾಗುತ್ತಿರುವುದು ಕಂಡು ಬರುತ್ತದೆ.

ಜನಸಾಮಾನ್ಯರಿಗೆ ಅನುಕೂಲವಾಗಲೆಂದು ಕಲ್ಯಾಣ ಮಂಟಪವನ್ನು ಎಲ್ಲಾ ಜನಾಂಗದವರು ಸೇರಿ ಕಟ್ಟಿಸಿರುವುದು ಒಂದು ವಿಶೇಷವಾಗಿದೆ.

ಜಗಳೂರಜ್ಜ ಹುಟ್ಟಿದ ಕಾಡಲಕುಂಟ ದಿಬ್ಬ. ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರವಾಗಿದೆ. ಇಲ್ಲಿಯು ವಾಸಿ ಕೊಯುತ್ತಾರೆ. ಕಾಡಲಕುಂಟೆ ದಿಬ್ಬ ಪೆತಂಬರಹಟ್ಟಿಯಿಂದ ಒಂದು ಕಿಲೊ ಮೀಟರ್ ದೂರದಲ್ಲಿದೆ. ಇಲ್ಲಿ ದೇವಸ್ಥಾನ ಕಟ್ಟಿಸಿಲ್ಲ. ಬುನಾದಿಯನ್ನಷ್ಟೇ ಹಾಕಿದ್ದಾರೆ. ಜಗಳೂರಜ್ಜ ಹುಟ್ಟಿದ ಪ್ರದೇಶದಿಂದ ಕಾಡಲಕುಂಟ ಬಂಡೆಗಳನ್ನು ಸುತ್ತಲೂ ಪೌಳಿಯು ಕಂಡು ಬರುತ್ತದೆ. ಶ್ರಾವಣ ಮಾಸದಲ್ಲಿ ಬಿಟ್ಟು ಉಳಿದ ದಿನಗಳಲ್ಲಿ ಇಲ್ಲಿಯ ಪಾಪನಾಯಕನಿಗೆ ವಾಸಿಯನ್ನು ಕೊಯುತ್ತಾರೆ.

ಜಗಳೂರಜ್ಜನ ದೇವಸ್ಥಾನದ ಪಕ್ಕದಲ್ಲಿ ಒಂದು ಬೃಹದಾಕಾರದ ಒಂದು ಆಲದಮರ ಇದೆ. ಇಂಥಹದ್ದೇ ಆಲದ ಮರವು ನುಂಕೆಮಲೆ ಬೆಟ್ಟದ ನುಂಕಪ್ಪನ ದೇವಸ್ಥಾನದ ಬಳಿ ಇದೆ. ಇಲ್ಲಿರುವ ಆಲದ ಮರಕ್ಕೆ ಸಾವಿರಾರು ವರ್ಷಗಳ ಇತಿಹಾಸ ಇರುವುದು ಕಂಡು ಬರುತ್ತದೆ.

ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ಹತ್ತಿರವಿರುವ 'ಗರಣಿ'ಯ ಬಳಿ ಅಲ್ಲಿಂದ ಸ್ವಲ್ಪ ಮುಂದೆ ಗೌರಿಪುರವಿದೆ. ಇಲ್ಲಿರುವ ಬೂದಿಗುಡ್ಡದ ಬಳಿಯೇ ಕಲ್ಲುಗಳನ್ನು ನೆಟ್ಟಿದ್ದು ಅವುಗಳನ್ನು 'ರಣಗಂಬಗಳು' ಎಂದು ಕರೆಯಲಾಗಿದೆ. ಇದರ ಪಕ್ಕದಲ್ಲಿಯೆ ವೇದಾಂತ ನದಿ ಇದೆ. ಈ ರಣಗಂಬಗಳಿಗೆ ಈಗಲೂ ಮ್ಯಾಸಮಂಡಲದವರು ಆಗಾಗ್ಗೆ ಪೂಜೆ ಸಲ್ಲಿಸಿ ವಾಸುಕೋಯ್ದು (ಕುರಿ) ವೀರರ ಸ್ಮರಣೆ ಮಾಡುತ್ತಾರೆ. ೨೦೦೬ನೇ ಮಾರ್ಚ್ ೯ ನೇ ತಾರೀಖಿನಂದು ಈ ಸ್ಮರಣೆ ನಡೆಯಿತು. ಈ ರಣಗಂಬಳಿಗಳ ಬಳಿಯೇ ಪಾಪ ಮುತ್ತಿರೇವು (ಜಗಳೂರು ಪಾಪನಾಯಕ) ತಮ್ಮ ದನಕರುಗಳಿಗೆ ನೀರುಣಿಸುತ್ತಿದ್ದ ಎಂಬ ಐತಿಹ್ಯವಿದೆ ಇಲ್ಲಿ ಒಂದು ಅಗಲವಾದ ನೀರು ನಿಲ್ಲುವ ಹೊಂಡದಂತಹ ಜಾಗವಿದೆ. ಜಗಳೂರು ಪಾಪನಾಯಕನ ಕುರುವಾಗಿ ಇದನ್ನು ಪಾಪ ಮುತ್ತಿರೆವು. ಎಂದು ಕರೆಯಲಾಗುತ್ತದೆ. ಅಜ್ಜನ ಗುಡಿಯನ್ನು ಪೌಳಿಯಾಕಾರದಲ್ಲಿ ಕಟ್ಟಲಾಗಿದೆ. ಪೂರ್ವಾಭಿ ಮುಖವಾಗಿ ಬಾಗಿಲಿರುವುದನ್ನು ಕಾಣಬಹುದು.

**ಕಂಪಳ ದೇವರ ಹಟ್ಟಿಯಲ್ಲಿ ಜಗಳೂರಜ್ಜನ ಧಾರ್ಮಿಕ ಕೇಂದ್ರ**

ಜಗಳೂರು ಪಾಪನಾಯಕ ಅಲಕ್ಷಿತ ನಾಯಕನಾಗಿ ಕಂಡು ಬರುತ್ತಾನೆ. ಚಿಕ್ಕುಂತ್ತಿ (ಕಂಪಳ ದೇವರ ಹಟ್ಟಿ) ಯಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ. (ಕಂಪಳ ಎಂದರೆ ಒಂದು ಸಮೂಹ ಅಥವಾ ಗುಂಪು ಎಂದರ್ಥ) ಈ ಹಟ್ಟಿ ಇಡಿ ಮ್ಯಾಸ ಮಂಡಲಕ್ಕೆ ಸಾಂಸ್ಕೃತಿಕ ನೆಲೆಯಾಗುವುದರೊಂದಿಗೆ ಈ ಬುಡಕಟ್ಟಿಗೆ ಧಾರ್ಮಿಕ ಕೇಂದ್ರವೂ ಆಗಿರುವುದನ್ನು ಕಾಣುತ್ತೇವೆ. ಮ್ಯಾಸಬೇಡರ ಬುಡಕಟ್ಟಿನ ಮೂಲ ಸಂಸ್ಕೃತಿಯನ್ನು ಮೂಲ ಲಕ್ಷಣಗಳನ್ನು, ರೂಪರೇಷಗಳನ್ನು ವಿಧಿ-ವಿಧಾನಗಳನ್ನು ರೂಢಿ ಸಂಪ್ರದಾಯಗಳನ್ನು, ಆಚರಣೆಗಳನ್ನು ಈ ಜನತೆ

ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವುದನ್ನು ಇಲ್ಲಿ ಕಾಣಬಹುದು. ಮೊದಲು ಅರಣ್ಯವಾಸಿಗಳಾಗಿದ್ದಾಗ ಮ್ಯಾಸಬೇಡರು ಚಿಕ್ಕ ಚಿಕ್ಕ ಗುಂಪುಗಳಾಗಿ ಜೀವಿಸುತ್ತಿದ್ದರು. ಅದನ್ನೇ ಈಗಲೂ ಅವರು ಮುಂದುವರೆಸಿಕೊಂಡು ಬಂದಿದ್ದಾರೆ. ತಮ್ಮ ಹೊಲಗದ್ದೆಗಳ ಹತ್ತಿರವೆ ಮನೆಗಳನ್ನು ಕಟ್ಟಿಕೊಂಡಿದ್ದಾರೆ. (ಮಲೆನಾಡಿನಲ್ಲಿ ಈ ಲಕ್ಷಣಗಳನ್ನು ಕಾಣುತ್ತೇವೆ) ವಿಶಿಷ್ಟವಾದ ನೀತಿ ನಿಯಮಗಳನ್ನು ಪಾಲಿಸಿಕೊಳ್ಳುತ್ತ ಬಂದಿರುವುದನ್ನು ಇಲ್ಲಿ ಕಾಣುತ್ತೇವೆ. ಮೊಳಕಾಲ್ಮೂರು ತಾಲೂಕಿನ ಹಟ್ಟಿಗಳ ಹತ್ತಿರ ಅಲ್ಲಲ್ಲಿ ಮುತ್ತಯ್ಯಗಳ ಗೂಡುಗಳಿವೆ. ಒಟ್ಟಾರೆ ಮ್ಯಾಸ ಬುಡಕಟ್ಟಿನ ಮೂಲ ಸಾಂಸ್ಕೃತಿಕ ನೆಲೆಯನ್ನು ಇಲ್ಲಿ ಕಾಣುತ್ತೇವೆ. ಪ್ರತಿ ವರ್ಷ ದೀಪಾವಳಿಯ ಸಂದರ್ಭದಲ್ಲಿ ದೂಲಿ ಹಬ್ಬ ನಡೆಯುತ್ತದೆ. ಜನವರಿ, ಫೆಬ್ರವರಿ ತಿಂಗಳಲ್ಲಿ ಗುಗ್ಗರಿ ಹಬ್ಬದ ನಡೆಯುತ್ತದೆ. ಈ ಜಾತ್ರೆಯನ್ನು ಮ್ಯಾಸಬೇಡರು ಅತ್ಯಂತ ನಿಯಮ ನಿಷ್ಠೆಯಿಂದ ಆಚರಿಸುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮುರು ತಾಲೂಕಿನ ಕಂಪಳ ದೇವರ ಹಟ್ಟಿ ಮಹಾಕ್ಷೇತ್ರವು ಚಿನ್ನಹಗರಿ ನದಿದಂಡೆಯ ಬಲಭಾಗದಲ್ಲಿದೆ. ಪ್ರಾಚೀನ ಮ್ಯಾಸಬೇಡರ ನೆಲೆಯಾದ ಇಲ್ಲಿ ಶಿಲಾಯುಗದ ನೆಲೆಗಳು, ಮಾನವಾಕೃತಿ ಕಲ್ಲುಗಳು ಮುಖ್ಯವೆನಿಸಿವೆ. ಸ್ಥಳೀಯರು ತಮ್ಮ ಪವಿತ್ರ ಭಾವನೆಗಳಿಂದ ಆಧ್ಯಾತ್ಮಿಕವಾಗಿ ಹಂಚಿಕೊಂಡಿದ್ದಾರೆ. ಇದಕ್ಕೆ ಚಿಕ್ಕುಂತಿ ಎಂಬ ಹೆಸರಿದೆ.

ನಾಯಕರ ಮೂಲ ನೆಲೆಯಾದ ಕಂಪಳ ಕ್ಷೇತ್ರ ಕರ್ನಾಟಕದ ತಿರುಪತಿಯಿದ್ದಂತೆ. ವೈಷ್ಣವ ಸಂಪ್ರದಾಯದ ಮಹಾಕ್ಷೇತ್ರಗಳಲ್ಲಿ ಇದು ವಿಶೇಷವಾಗಿದೆ. ಶ್ರೀಕೃಷ್ಣ ಇಲ್ಲಿ ಬೇಡರನ್ನು ಬೇಟೆಯಿಂದ ರೂಪಾಂತರಗೊಳಿಸಿದ್ದನಂತೆ. ಪ್ರಾಣಿ ಹಿಂಸೆಗೆ ವಿದಾಯ ಹೇಳಿದ ಬೇಡರಿಗೆ ಇದು ವರದಾನವಾದ ನೆಲೆ. ಶ್ರೀಕೃಷ್ಣ ಸಂಹಾರವಾಗುವವರೆಗೆ ಒಂದು ಪಂಗಡದಲ್ಲಿದ್ದ ಮ್ಯಾಸಬೇಡರು ಗೊಲ್ಲರೆಂದು ಇಬ್ಭಾಗವಾದಂತೆ ಇಲ್ಲಿ ಸಾಂಸ್ಕೃತಿಕ ಸಂಘರ್ಷ ನಡೆದು ಬೇಟೆಯನ್ನು ತೊರೆದು ಪಶುಪಾಲನೆ ಕೈಗೊಂಡಿದ್ದು, ಗೊಲ್ಲರ ಗೋಪಾಲಕರಾಗಿ ಮುಂದುವರೆದದ್ದು, ಮೇಲಿನ ಘಟನೆ ದೃಢೀಕರಿಸುತ್ತದೆ. ಅಂದಿನಿಂದ ಬೇಡರು ಬೇಟೆ ಪ್ರಾಣಿ ಹಿಂಸೆ ಕೈಬಿಟ್ಟು ಮಾನವಕುಲದ ಒಳಿತಿಗಾಗಿ ಶ್ರಮಿಸಲು ಕರೆ ನೀಡಿ ಗೋಪಾಲನೇ ಮಾಡಲು ಸಾಲಿಗ್ರಾಮ, ಕೊಳಲು ಮುತ್ತಿನ ಗೆಜ್ಜೆ(ಮುತ್ತಿನ ಕಾಲ್ದಂಡೆ) ಗಳನ್ನು ಕೊಟ್ಟಿದ್ದರು. ವರ್ಷಕ್ಕೆ ಒಂದು ಬಾರಿ ಗುಗ್ಗರಿ ಹಬ್ಬ, ದೀಪಾವಳಿ ಹಬ್ಬಗಳು ನಡೆಯುತ್ತವೆ. ಕಟ್ಟುನಿಟ್ಟಿನ ಆಚರಣೆಗಳನ್ನು ಕರಿನಾರು ಬೆಡಗಿನವರು ಮುಂದುವರೆಸಿಕೊಂಡು ಬಂದಿದ್ದಾರೆ.

ಕಂಪಳ ದೇವರ ಹಟ್ಟಿಯಲ್ಲಿ ಜಗಳೂರು ಪಾಪನಾಯಕ, ಗಾದರಿಪಾಲನಾಯಕ ಕಂಪಳ ರಂಗಸ್ವಾಮಿ ದಡ್ಡಿ ಮತ್ತು ಮುತ್ತೈಯನ ದೇವರುಗಳು ಕಂಡು ಬರುತ್ತವೆ. ಕಂಪಳರಂಗನು ಮ್ಯಾಸನಾಯಕರ ಪ್ರಮುಖ ದೇವರುಗಳಲ್ಲಿ ಒಬ್ಬ. ಇಲ್ಲಿ ನಡೆಯುವ ಉತ್ಸವವನ್ನು ಮ್ಯಾಸರು ಅತ್ಯಂತ ನಿಷ್ಠೆಯಿಂದ ಆಚರಿಸುತ್ತಾರೆ. ಕಂಪಳ ದೇವರಹಟ್ಟಿ ಮ್ಯಾಸಬೇಡರ ಗುರುಸ್ಥಾನವಾಗಿದೆ.

ದೂಲಿಯ ಸಂದರ್ಭದಲ್ಲಿ ಹಾಗೂ ಗುಗ್ಗರಿ ಹಬ್ಬದಲ್ಲಿ ಕಂಪಳರಂಗಸ್ವಾಮಿಗೂ ಊರ ಹೊರಗಡೆ ಬಂದು ನೆಲೆಸುತ್ತಾನೆ. ಕಂಪಳರಂಗಸ್ವಾಮಿಗೂ ಜಗಳೂರು ಪಾಪನಾಯಕನಿಗೂ ಲಕ್ಕಿಯ ಬರಲಿನಿಂದ ಗುಡಿಸಲನ್ನು ಕಟ್ಟುತ್ತಾರೆ. ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಸುತ್ತಲು ಕಲ್ಲಿನ ಗೋಡೆಯನ್ನು ಕಟ್ಟಿ ಸ್ವಲ್ಪ ಮಟ್ಟಿಗೆ ಲಕ್ಕಿಯ ಬರಲನ್ನು ಬಳಸಿ ಪೌಳಿ ಕಟ್ಟುತ್ತಾರೆ. ಗುಡಿಸಲನ್ನು ನಿರ್ಮಿಸುತ್ತಾರೆ. ಕಂಪಳರಂಗಸ್ವಾಮಿಯ ಊರ ಒಳಗೆ ಕಲ್ಲಿನಿಂದ ನಿರ್ಮಿಸಿದ ದೇವಾಲಯವಿದ್ದರೂ ಪಕ್ಕದಲ್ಲಿ ಲಕ್ಕಿಯ ಬರಲು ಹಾಗೂ ಕಾಯಿಸಿಗಳಿಂದ ನಿರ್ಮಿಸಿದ ಗುಡಿಸಲುಗಳು ಇರುವುದನ್ನು ಇಂದು ಸಹ ನೋಡಬಹುದು. ಈ ಗುಡಿಯೊಳಗೆ ಪೂಜಾರಿಗೆ ಮಾತ್ರ ಪ್ರವೇಶ. ಬೇರೆಯವರಿಗೆ ಪ್ರವೇಶ ನಿಷಿದ್ಧ.

### ಜಗಳೂರುಜ್ಜನ ಧಾರ್ಮಿಕ ಕೇಂದ್ರ : ಜಗಳೂರು

ಜಗಳೂರಜ್ಜನ ಧಾರ್ಮಿಕ ಕೇಂದ್ರಗಳಲ್ಲಿ ಜಗಳೂರು ಒಂದು. ಜಗಳೂರು ಪಾಪನಾಯಕ ಯುದ್ಧ ಮಾಡಿ ಮಡಿದಿರುವ ಸ್ಥಳವೇ ಈತನ ಧಾರ್ಮಿಕ ಕೇಂದ್ರವಾಗಿದೆ. ಜಗಳೂರಜ್ಜ ಯುದ್ಧದಲ್ಲಿ ಮಡಿದು ಭೂಮಿಯಲ್ಲಿ ಐಕ್ಯವಾದ ಸ್ಥಳದಲ್ಲೇ ಜಗಳೂರಜ್ಜನ ದೇವಸ್ಥಾನವನ್ನು ಕಟ್ಟಲಾಗಿದೆ. ಗರ್ಭಗುಡಿಯ ಮತ್ತು ಸಭಾ ಮಂಟಪದ ಬಾಗಿಲನ್ನು ಇದೂವರೆಗೂ ತೆಗೆದಿರುವುದಿಲ್ಲ. ಜಗಳೂರಜ್ಜ ಒಬ್ಬ ಪಶುಪಾಲಕನಾಗಿ ಸಾಂಸ್ಕೃತಿಕ ಬದುಕಿನೊಂದಿಗೆ ಆಧ್ಯಾತ್ಮಿಕ ರಂಗವನ್ನು ಪ್ರವೇಶಿಸಿದ ಮಹಾವೀರ. ಜಗಳೂರಿನಲ್ಲಿ ರಾಜನು ಜನರಿಗೆ ವಿದಿಸುತ್ತಿದ್ದ ತೆರೆಗೆಯಿಂದ ಬೇಸತ್ತಿದ್ದರು. ಈ ವೇಳೆಯಲ್ಲಿ ಜಗಳೂರಜ್ಜ ಪ್ರವೇಶಿಸಿ ರಾಜನ ವಿರುದ್ಧ ಹೋರಾಡಿ ತೆರೆಗೆಯನ್ನು ನಿಷೇದಿಸಿದ ಸ್ಥಳವೇ ಜಗಳೂರು. ಆಧುನಿಕತೆಯ ಪ್ರಭಾವದಿಂದ ಸಭಾಮಂಟಪವನ್ನು ಕಲ್ಲು ಬಂಡೆಗಳಿಂದ ಕಟ್ಟಲಾಗಿದೆ. ಕೆರೆಯ ಹಿಂದುಗಡೆ ದೇವಸ್ಥಾನವು ಕಂಡು ಬರುತ್ತದೆ. ಶಿವನೆ ವೇಷವನ್ನು ಧರಿಸಿ ಜಗಳೂರಜ್ಜನೊಂದಿಗೆ ಯುದ್ಧದಲ್ಲಿ ಹೋರಾಡಿ ಈತನ ಮೇಲೆ ಬಾಣ ಪ್ರಯೋಗ ಮಾಡುತ್ತಾನೆ. ಆದರೆ ಜಗಳೂರಜ್ಜ ನೀನು ಸ್ತ್ರೀ ಎನ್ನುವ ಮಾತ್ರಕ್ಕೆ ನಿನ್ನ ಮೇಲೆ ಬಾಣ ಪ್ರಯೋಗ ಮಾಡುವುದಿಲ್ಲವೆಂದು ಹೇಳುತ್ತಾನೆ. ಆ ವೇಳೆಗೆ ಇಡೀ ಭೂಮಿಯ ಬಾಯ್ಬಿಡಲು ಜಗಳೂರಜ್ಜ ಭೂಮಿಯಲ್ಲಿ ಐಕ್ಯನಾದ ಎಂಬ ಪ್ರತೀತಿ ಇದೆ. ಆ ಸ್ಥಳವೇ ಜಗಳೂರಿನಲ್ಲಿರುವ ಜಗಳೂರಜ್ಜನ ದೇವಸ್ಥಾನ.

ಜಗಳೂರಿನಲ್ಲಿರುವ ಜಗಳೂರಜ್ಜನ ದೇವಸ್ಥಾನಕ್ಕೆ ಮ್ಯಾಸಬೇಡರ ಗುರುಸ್ಥಾನದಲ್ಲಿ ನೆಲೆಸಿರುವ ಜಗಳೂರಜ್ಜ ಹಾಗೂ ಕಂಪಳರಂಗಸ್ವಾಮಿ ಇಲ್ಲಿಗೆ ಬಂದು ಪೂಜೆಯನ್ನು ಮಾಡಿಸಿ ಕೊಂಡು ಹೋಗುತ್ತಾನೆ. ಆ ವೇಳೆಯಲ್ಲಿ ಜಗಳೂರ ಪಾಪನಾಯಕನ ದೇವಸ್ಥಾನದ ಮುಂದುಗಡೆ ವಾಸಿ ಕೊಯುತ್ತಾರೆ. ಈ ವೇಳೆಯಲ್ಲಿ ಸಾವಿರಾರು ಭಕ್ತಾಧಿಗಳು ಬಂದು ಸೇರುತ್ತಾರೆ. ಜಗಳೂರಿನಲ್ಲಿರುವ ಜಗಳೂರಜ್ಜನನ್ನು ಮ್ಯಾಸಬೇಡ ಸಮುದಾಯದವರು ಸಾಂಸ್ಕೃತಿಕ ವೀರನೆನ್ನದೇ ದೇವರೆಂಬ ಭಾವನೆಯಿಂದ ಪೂಜಿಸುತ್ತಾರೆ. ಜಗಳೂರು ತಾಲೂಕಿನಲ್ಲಿ ಮ್ಯಾಸಬೇಡ ಸಮುದಾಯವು ಅತಿ

ಹೆಚ್ಚು ಕಂಡು ಬರುತ್ತದೆ. ಇಲ್ಲಿನ ಮ್ಯಾಸಬೇಡರ ತಮ್ಮ ಮೂಲ ನೆಲೆಗಳಲ್ಲಿ ಇನ್ನೂ ಅನೇಕ ಆಚರಣೆಗಳನ್ನು ಬಿಟ್ಟುಕೊಟ್ಟಿಲ್ಲ. ಇಂದಿಗೂ ಸಹ ಮುಂದುವರೆಸಿಕೊಂಡು ಹೋಗುತ್ತಿರು ವುದು ಸಂಸ್ಕೃತಿಯ ಅನನ್ಯತೆಯಾಗಿದೆ. ಇಲ್ಲಿರುವ ಮೂಲನೆಲೆಗಳಲ್ಲಿ ಲಿಂಗನಹಳ್ಳಿ (ಯರ) ಆಕನೂರಿನಲ್ಲಿ ಪೋತರಾಜರು ಕಂಡು ಬರುತ್ತಾರೆ. ಇಂದಿಗೂ ಸಹ ಇವರು ತಮ್ಮ ವೃತ್ತಿಯನ್ನು ಬಿಟ್ಟುಕೊಟ್ಟಿಲ್ಲ. ಮಾರಿಹಬ್ಬದ ಸಂದರ್ಭದಲ್ಲಿ ಗಾವು ಜಿಗಿಯುವುದು ಇವರ ಒಂದು ವೃತ್ತಿಯಾಗಿದೆ.

**ಪಾಪ ನಾಯಕನನ್ನು ಕುರಿತು ಮೌಖಿಕ ಸಾಹಿತ್ಯ.**

ಬುಡಕಟ್ಟು ಸಮುದಾಯಗಳಲ್ಲಿ ಸಂಗೀತ ಹಾಡು ಕುಣಿತ ಅವರ ಬದುಕಿನ ಒಂದು ಭಾಗವಾಗಿದೆ. ಪಾಪನಯಕನ ಸಂಬಂಧವಾಗಿ ಈ ಪರಿಸರದಾದ್ಯಂತ ಅನೇಕ ಹಾಡುಗಳು, ಐತಿಹ್ಯಗಳು, ಗಾದೆ ಅದರಂತೆ ನಾಟಕ ರಚನೆಯಾಗಿದೆ. ಈ ಮೌಖಿಕ ಸಾಹಿತ್ಯವು ಹೆಚ್ಚಾಗಿ ಪಾಪನಾಯಕನ ಭೌಗೋಳಿಕ ಪರಿಸರ ಈ ಕ್ಷೇತ್ರದ ಪವಾಡಗಳನ್ನು ವಿವರಿಸುತ್ತವೆ. ಗೌದ್ರ ಮನೆಯಲ್ಲಿ ದನ ಕಾಯುತ್ತಾ ಪವಾಡಗಳನ್ನು ತೋರಿಸುವುದು. ಕಳ್ಳತನ ಮಾಡಿದವರನ್ನು ಬಯಲಿಗೆಳೆಯುವುದು ಅವರಿಗೆ ತಕ್ಕ ಶಿಕ್ಷೆ ವಿಧಿಸುವುದು ಆ ಮೂಲಕ ಜನರನ್ನು ಆಕರ್ಷಿಸಿ ತನ್ನ ನುಯಾಯಿಗಳಾಗಿಸಿಕೊಳ್ಳುವುದನ್ನು ಕಾಣುತ್ತೇವೆ. ಪಾಪನಾಯಕನನ್ನು ಕುರಿತ ಸ್ತುತಿ ಪದ್ಯ ಗಮನಿಸಬಹುದು.

ಪಾಲಿಕೆ ತಂದೆವಯ್ಯ ಪಾಪಯ್ಯ
ಪಾದಕೆ ಬಂದೆವಯ್ಯ
ಜಗಲೂರು ಅಂಬೋದು ಮುಗಲು ಮುತ್ತಿನ ಕ್ವಾಟೆ
ಅದುರಾಗೈದಾನೆ ಮನಿಗಾರ II

ಪಾಲಿಕೆ ತಂದೆವಯ್ಯ
ಅದುರಾಗೆ ಐದಾನೆ ಮನಿಗಾರ ಪಾಪಯ್ಯ
ಗುಲಗುಂಜಿ ಗುರಿಯ ವಾಡುವೋನೆ
ಪಾಲಿಕೆ ತಂದೇವಯ್ಯೋ ಪಾಪಯ್ಯ
ಪಾದಕ್ಕೆ ಬಂದೇವಯ್ಯಾ II

**ಜಗಳೂರು ಪಾಪನಾಯಕನ ಪುರಾಣ**

ಪಾಪನಾಯಕ ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಬುಡಕಟ್ಟುಗಳಿಗೆ ಹಾಗೂ ಇತರೆ ಸಮುದಾಯಗಳಿಗೆ ಆರಾಧ್ಯ ದೈವನಾಗಿದ್ದಾನೆ. ಈತನನ್ನು ಅವತಾರಪುರುಷ, ಸಿದ್ಧಿಪುರುಷ, ಹಾಗೂ ಪವಾಡಪುರುಷನೆಂದು ಈ ಜನರು ಭಾವಿಸಿದ್ದಾರೆ. ಜಗಳೂರು ಪಾಪನಾಯಕ ಕೇವಲ ಮ್ಯಾಸಬೇಡರ ಸಮುದಾಯದವರಿಗೆ ಮಾತ್ರ ಸೀಮಿತವಾಗಿಲ್ಲ.

**ಪುರಾಣಗಳಲ್ಲಿ ಪಾಪನಾಯಕ**

ಜಗಳೂರು ಪಾಪನಾಯಕನನ್ನು ಕುರಿತಾದ ಪುರಾಣವು ವಿಶಿಷ್ಟವಾಗಿರುವುದನ್ನು ನಾವು ಕಾಣುತ್ತೇವೆ. ಮಂದಲ ಗೋತ್ರದ ಮೂಲ ಪುರುಷನಾದ ಮಂದಲ ಭೂಪಲ ರಾಜನ ಮಗಳಾದ ಶಿವಶರಣೆ ದಾನಸಾಲಮ್ಮಳನ್ನು ಮಲ್ಲಿನಾಯಕ ಗೋತ್ರದ ಮೂಲಪುರುಷನಾದ ಸೂರ್ಯ ಶುಕ್ಲ ಮಲ್ಲಿನಾಯಕನಿಗೆ ಕೊಟ್ಟು ವಿವಾಹ ಮಾಡಿದ್ದರು. ಶುಕ್ಲಮಲ್ಲಿನಾಯಕನು ಎಪ್ಪತ್ತೇಳು ಸಾವಿರದ ದೇವಗಂಪಳವನ್ನು ಸಾಕಿಕೊಂಡು ವಿಜಯನಗರ ಪ್ರಾಂತ್ಯಕ್ಕೆ ಸೇರಿದ ಯರಮಲೆ, ನೇಲಮಲೆ, ಸಿಯೇಟಿಸಿಂಗನ ಮಲೆಗಳಲ್ಲಿ ವಾಸ ಮಾಡತೊಡಗಿದ ಬೇರೆ ಜನ ವಾರ ಕೇರಿ ಪಟ್ಟಣಗಳೆನ್ನದೆ ಕಾಡಿನಲ್ಲಿ ದನಕರುಗಳ ಗೂಡು ತಿರುವಿಕೊಂಡಿದ್ದ. ಕೋಳಿಯ ಕೂಗು, ಹಂದಿಯ ಸುಳಿವು, ಇವರ ಗೂಡಿನ ಕಡೆ ಬರಬಾರದೆಂಬತ್ತಿತ್ತು. ಈ ರೀತಿಯಾಗಿ ಜೀವನ ನಡೆಸುತ್ತಿದ್ದರು. ಆದರೆ ಬಹುದಿನಗಳ ಕಾಲ ಈ ದಂಪತಿಗಳಿಗೆ ಮಕ್ಕಳಾಗಲಿಲ್ಲ. ಶಿವಶರಣೆ ದಾನಸಾಲಮ್ಮಳ ತಪಃಶಕ್ತಿಗೆ ದೊರೆತ ಕುಂಬಳಕಾಯಿಂದ ಏಳು ಜನ ಮಕ್ಕಳಲ್ಲಿ ಒಬ್ಬನಾದವನು 'ಕೊಂಡ್ಲ ಮಲ್ಲರಾಜ' ಇವನಿಗೆ ಸೂರ್ಯಯರಗಟ್ಟನಾಯಕ, ಕೋರಲಮಲ್ಲಿನಾಯಕ, ಚಿನ್ನಪಾಲ್ನಾಯಕ ಎಂಬ ಮೂರು ಜನ ಸಹೋದರರು ಇದ್ದರು. ಶುಕ್ಲಗಿರಿ ಪರ್ವತದಲ್ಲಿ ದೇವರ ದನಗಳನ್ನು (ಮುತ್ತಯ್ಯಗಳನ್ನು) ಕಾಯುತ್ತಾ ಇದ್ದರು. ಕಾಲಾಂತರದಲ್ಲಿ ಈ ಮೂರು ಜನ ಸಹೋದರರು ತಮ್ಮ ತಂದೆಯಿಂದ ದೊರೆತ ಎಪ್ಪತ್ತೇಳು ಸಾವಿರ ದೇವಗಂಪಳವನ್ನು (ದನಕರುಗಳನ್ನು) ಹಂಚಿಕೊಂಡು ತಮಗೆ ಅನುಕೂಲವಾದ ಒಂದೊಂದು ಸ್ಥಳದಲ್ಲಿ ಗೂಡನ್ನು ಕಟ್ಟಿಕೊಂಡು ದನಗಳನ್ನು ಕಾಯುತ್ತಾ ಜೀವಿಸುತ್ತಿದ್ದರು. ಹೀಗೆ ಚಿತ್ರದುರ್ಗ ತಾಲೂಕು ಬೆಳಗಟ್ಟದ ಸುತ್ತಮುತ್ತ ದನಗಳನ್ನು ಕಾಯುತ್ತ ಅಲ್ಲಿನ ಮ್ಯಾಸಬೇಡರಿಗೆ ಆರಾಧ್ಯದೇವತಾ ಪುರುಷನಾಗಿರುವನು. ಸೂರ್ಯಯರಗಟ್ಟಿನಾಯಕ, ನನ್ನಿವಾಳ ಸುತ್ತಮುತ್ತ ದನಗಳನ್ನು ಕಾಯುತ್ತ ಅಲ್ಲಿನ ಮ್ಯಾಸಬೇಡರಿಗೆ ಆರಾಧ್ಯದೇವನಾಗಿರುವನು. ಚಿನ್ನಪಾಲನಾಯಕ ಮುಂದೆ ನನ್ನಿವಾಳ ಕೆಳಗಡೆ ಇರುವ ಕಾಡಲಕಂಟ (ಚಳ್ಳಕೆರೆ ಸಮೀಪದಲ್ಲಿರುವ ಗೊರ್ಲಕಟ್ಟೆ, ಪೆತಮನಹಟ್ಟಿ) ಸುತ್ತಮುತ್ತಲಿನಲ್ಲಿ ವಾಸವಾಗಿದ್ದಾನೆ. ಕೋರಮಲ್ಲಿನಾಯಕ ಇವನಿಗೆ ತನ್ನ ತಂದೆಯಿಂದ ದೊರೆತ ದೇವರ ದನಗಳಲ್ಲದೆ ಶ್ರೀಕೃಷ್ಣನಿಂದಲೂ ಕೆಲವು ದೇವರದನಗಳು ದೊರೆತಿದ್ದವೆಂದು ಹಿರಿಯ ನಿರೂಪಕರು ಹೇಳುತ್ತಾರೆ ಈ ದೇವರ ದನಗಳನ್ನು ಪಡೆದುಕೊಂಡ ಕೋರಲಮಲ್ಲನಾಯಕ, ಕಕ್ಕಲಬೆಂಚು, ಕಾರಚೆರವು ಕಾವಲಿನಲ್ಲಿ ರೊಪ್ಪಗಳನ್ನು ಹಾಕಿಕೊಂಡು ತನ್ನ ಹೆಂಡತಿ ಬಾಳಾರಪಟ್ಟಮ್ಮ ತಂಗಿ ಪಚ್ಚಿ ಪದಿಪಾಲಮ್ಮರೊಂದಿಗೆ ಜೊತೆಗೂಡಿ ದೇವರ ದನಗಳನ್ನು ಕಾಯುತ್ತ ಜೀವನ ನಡೆಸುತ್ತಿದ್ದರು.

ಕೋರಲಮಲ್ಲಿನಾಯಕನ ತಂಗಿ "ಪಚ್ಚಿ ಪದಿ ಪಾಲಮ್ಮ" ಕಾಡಿನ ಹುಡುಗಿಯಾಗಿದ್ದರೂ ಸಹಜ ಸೌಂದರ್ಯದಲ್ಲಿ ನೋಡುವವರನ್ನು ಆಕರ್ಷಿಸುವ ಮನಮೋಹಕ ರೂಪವನ್ನು ಪಡೆದಿದ್ದಳು.

ಒಂದು ದಿನ ಪಚ್ಚೆ ಪದಿ ಪಾಲಮ್ಮ ನೀರು ತರಲು ಹಳ್ಳಕ್ಕೆ ಮಣ್ಣಿನ ಗಡಿಗೆಯನ್ನು ತೆಗೆದುಕೊಂಡು ಹೋಗಿದ್ದಳು ಅಂದವಾದ ಪಟ್ಟೆಕಟ್ಟೆ ರಂಗುರಂಗಿನ ಗರಿಗಳನ್ನು ಮುಡಿದುಕೊಂಡು ತುಂಬಿದ ಗಡಿಗೆಯನ್ನು ಹೊತ್ತು ನೀರನ್ನು ತರುವಾಗ ಅದೇ ಕಾಡಿಗೆ 'ಕ್ಯಾಸಪುರದ ಕ್ಯಾಸಯ್ಯ' ಎಂಬ ಬೇಡರ ದೊರೆಯೊಬ್ಬನು ತನ್ನ ದಂಡು ದಳದೊಂದಿಗೆ ಬೇಟೆಯಾಡಲು ಬಂದಿದ್ದನು. ಬೇಟೆಗಾಗಿ ಬಂದು ಬಾಯಾರಿಕೆಯಿಂದ ಕಾರಚೆರವು ಹಳ್ಳಕ್ಕೆ ನೀರು ಕುಡಿಯಲು ಬಂದಾಗ ಅಲ್ಲಿ ಪಚ್ಚೆಪದಿಪಾಲಮ್ಮಳನ್ನು ಕಂಡು ಮೋಹಿತನಾದನು. ಅವನಿಗೆ ಆದ ಬಾಯಾರಿಕೆ, ದಣಿವು, ಆಯಾಸ ಮಾಯವಾಯಿತು. ಸೌಂದರ್ಯದ ತಂಗಾಳಿ ಬೀಸಿದಂತಾಗಿ ಮನಸ್ಸು ತಂಪಾಗತೊಡಗಿತು. ನೀರು ತುಂಬಿದ ಹಳ್ಳದ ದಡದಲ್ಲಿ ಪಾಲಮ್ಮಳ ರೂಪರಾಶಿ ಕ್ಯಾಸಯ್ಯನಿಗೆ ಕೆಸರಿನಲ್ಲಿ ಕಮಲಗಳನ್ನು ಕಂಡಂತೆ ಭಾಸವಾಯಿತು. ಅವಳ ಮಾಂಗಲ್ಯ ಕಾಣಲಿಲ್ಲ. ಇದರಿಂದ ಕ್ಯಾಸಯ್ಯನಿಗೆ ಈ ಕಾಡಿನ ಚಲುವೆಗೆ ಮದುವೆಯಾಗಿಲ್ಲವೆಂದು ಖಚಿತವಾಯಿತು. ಹೇಗಾದರೂ ಮಾಡಿ ಈ ಕಾಡಿನ ಕಣ್ಮಣಿಯನ್ನು ಕೊಂಡೊಯ್ದು ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು.ಪಾಲಮ್ಮ ಕೊಡವನ್ನು ಹೊತ್ತುಕೊಂಡು ತನ್ನ ರೊಪ್ಪದ ಕಡೆ ಹೋಗುತ್ತಿದ್ದಳು. ಅವಳಿಗೆ ಇವರಾರ ಪರಿವೆಯೂ ಇರಲಿಲ್ಲ. ಕ್ಯಾಸಯ್ಯನು ತನ್ನ ಜೊತೆಯಲ್ಲಿದ್ದ ಅನುಚರರಿಗೆ ಅವಳನ್ನು ಅಪಹರಿಸಿಕೊಂಡು ಹೋಗುವಂತೆ ಸನ್ನೆ ಮಾಡಿದನು. ಕೂಡಲೇ ಅನುಚರರು ಪಾಲಮ್ಮನನ್ನು ಎತ್ತಿಕೊಂಡು ಹೋದರು. ಪಾಲಮ್ಮ ಎಷ್ಟು ಕೂಗಿಕೊಂಡರು ಪ್ರಯೋಜನವಾಗಲಿಲ್ಲ. ತಲೆಯ ಮೇಲೆ ಹೊತ್ತಿದ್ದ ನೀರಿನ ಕೊಡ ಕೆಳಗೆ ಬಿದ್ದು ಚೂರು ಚೂರಾಯಿತು.ಸ್ಥಿತಿ ಏನಾಯಿತೆಂದು ತಿಳಿಯುವ ಕುರುಹುಗಳಾದವು. ಕ್ಯಾಸಯ್ಯನು ಉಳಿದ ತನ್ನ ದಂಡುದಳದೊಂದಿಗೆ ಹೊರಟ ಕ್ಯಾಸಪುರವನ್ನು ಸೇರಿ ವಿಳಂಬ ಮಾಡದೆ ಪಾಲಮ್ಮಳೊಂದಿಗೆ ಗಾಂಧರ್ವ ವಿವಾಹ ಮಾಡಿಕೊಂಡನು. ಈ ವಿವಾಹ ಕ್ಯಾಸಪುರದ ಜನರಿಗೆ ಆಶ್ಚರ್ಯವನ್ನು ಉಂಟು ಮಾಡಿ ನಾನಾ ರೀತಿ ಮಾತನಾಡಲು ಅವಕಾಶವಾಯಿತು. ಇತ್ತ ಪಾಲಮ್ಮ ನೀರಿಗೆ ಹೋದವಳು ಎಷ್ಟು ಹೊತ್ತಾದರು ಬಾರದೇ ಇರುವುದನ್ನು ಕಂಡ ಕೋರ್ಲಮಲ್ಲಿನಾಯಕ ಬಾಳಾರಪಟ್ಟಮ್ಮ ನದಿಯ ಕಡೆಗೆ ಪಾಲಮ್ಮಳನ್ನು ಹುಡುಕಲು ಹೊರಟರು. ನದಿಯ ಬಳಿಗೆ ಹೋಗಿ ನೋಡಿದಾಗ ಅವಳ ಸುಳಿವು ಕಾಣಲಿಲ್ಲ. ನೀರಿನ ಗಡಿಗೆ ಒಡೆದು ಚೂರುಗಳು ಬಿದ್ದಿರುವುದು ಕಂಡಿತು. ಗಡಿಗೆಯ ಚೂರುಗಳನ್ನು ಕಂಡ ಸತಿಪತಿಗಳು ಯೋಚಿಸುತ್ತ ಮರಗಿಡಗಳ ಮರೆಯಲ್ಲಿ ಪೊದೆಗಳ ಸಂದುಗಳಲ್ಲಿ , ಕಲ್ಲು ಪೊಟರುಗಳಲ್ಲಿ ಹುಡುಕಿದರು.ಪಾಲಮ್ಮ ಎಲ್ಲಿಯೂ ಕಾಣದಿದ್ದಕ್ಕೆ ಚಿಂತಿಸುತ್ತ ಯಾರಾದರೂ ಇವಳನ್ನು ಅಪಹರಿಸಿರಬಹುದೇ ದುಷ್ಟ ಪ್ರಾಣಿಗಳಿಗೆ ಬಲಿಯಗಿರಬಹುದೆ ಎಂದು ಸತಿಪತಿಗಳಿಬ್ಬರು ಕಾಡಿನಲ್ಲಿ ಹುಡುಕಲು ಹೊರಟರು.

ಸತಿಪತಿಗಳು ಪಾಲಮ್ಮಳನ್ನು ಹುಡುಕುತ್ತ ಹೋಗುತ್ತಿರುವಾಗ ಕ್ಯಾಸಪುರದ ಕಡೆಯಿಂದ ದಾರಿಹೋಕರು ಬರುತ್ತಿದ್ದುದನ್ನು ಕಂಡು ಮಲ್ಲನಾಯಕ ತನ್ನ ತಂಗಿ ಪಾಲಮ್ಮಳ ಬಗ್ಗೆ ವಿಚಾರಿಸಿದಾಗ

ಅವರು 'ಕ್ಯಾಸಪುರದ' ಕ್ಯಾಸಯ್ಯನು ಯಾವುದೋ ಒಬ್ಬ ಕಾಡಿನ ಹುಡುಗಿಯನ್ನು ಹೊತ್ತು ತಂದು ಗಾಂಧರ್ವ ವಿವಾಹ ಮಾಡಿಕೊಂಡ ವಿಚಾರ ತಿಳಿಸಿದರು. ಇದರಿಂದ ಇವರಿಗೆ ವಿಷಯ ಖಚಿತವಾಯಿತು. ದಂಪತಿಗಳಿಬ್ಬರೂ ಕ್ಯಾಸಪುರಕ್ಕೆ ಹೋಗಿ ಕ್ಯಾಸಯ್ಯನನ್ನು ಕಂಡು ಅವರವರ ಹಣೇಬರಹ ವಿಧಿಲೀಲೆ ಈ ರೀತಿ ಇರುವಾಗ ಯಾರು ಮಾಡುವುದೇನು? " ನನ್ನ ತಂಗಿ ತಾಯಿ-ತಂದೆಯರ ಪ್ರೀತಿ ವಾತ್ಸಲ್ಯವನ್ನು ಕಾಣದವಳು ನಾನೇ ಅವಳ ತಾಯಿ-ತಂದೆಯ ಸ್ಥಾನದಲ್ಲಿ ನಿಂತು ಚೆನ್ನಾಗಿ ಸಾಕಿ ಸಲುಹಿದ್ದೆನು. ಈ ನನ್ನ ತಂಗಿ ಪ್ರಪಂಚದ ಸ್ವಸ್ಥಾನಕ್ಕೆ ಮರಳಿದಳು.

**ಪಾಪನಾಯಕನ ಜನನ**

ಕೋರ್‍ಲಮಲ್ಲನಾಯಕ ಬಾಳಾರಪಟ್ಟಮ್ಮಳೊಡನೆ ಮದುವೆಯಾಗಿ ೪೦ ವರ್ಷಗಳ ಕಾಲ ದಾಂಪತ್ಯ ಜೀವನ ಕಳೆದರು. ಸಂತಾನ ಪ್ರಾಪ್ತಿಯಿಲ್ಲದೆ ಹಗಲಿರುಳು ಮಕ್ಕಳ ಕೊರಗಿನಲ್ಲಿ ಉಳಿದರು. ಪುತ್ರ ಸಂತಾನಕ್ಕಾಗಿ ಪ್ರತಿನಿತ್ಯ ಸೂರ್ಯ ಚಂದ್ರರಿಗೆ ಪೂಜಿಸುವುದು. ಕಾಡಿನಲ್ಲಿರುವ ಬನ್ನಿಮರ, ಆಲದಮರ, ಬೇವಿನಮರಗಳಿಗೆ ಪೂಜಿಸಿ ನಮಸ್ಕರಿಸುವುದು ಇದು ಅವರ ಪ್ರತಿ ನಿತ್ಯದ ಕೆಲಸವಾಗಿತ್ತು. ಇಂದಿಗೂ ಸಂತಾನ ಭಾಗ್ಯಕ್ಕೆ ಈ ಮರಗಳನ್ನು ಪೂಜಿಸುವುದನ್ನು ಕಾಣುತ್ತೇವೆ. ಈ ದಂಪತಿಗಳ ಭಕ್ತಿಗೆ ಮೆಚ್ಚಿ ಪಾರ್ವತಿ ಪರಮೇಶ್ವರರು ಸಂತಾನ ಭಾಗ್ಯ ಕರುಣಿಸಿದರು. ದೈವ ಸಂಕಲ್ಪದಿಂದ ಬಾಳಾರಪಟ್ಟಮ್ಮ ಗರ್ಭ ಧರಿಸಿದಳು. ನವಮಾಸಗಳು ತುಂಬುತ್ತಾ ಬಂದವು. ಈಕೆಗೆ ಅಸಾಮಾನ್ಯ ಬಯಕೆಗಳು ಕಾಡಿದವು. ಕೊಳದಲ್ಲಿರುವ ಕಮಲದ ಹೂವುಗಳನ್ನು ನೋಡುವ ಬಯಕೆ. ಆಕಾಶದಲ್ಲಿ ಹಾರುವ ಹಕ್ಕಿ ಪಕ್ಷಿಗಳನ್ನು ನೋಡುವ ಬಯಕೆ. ನಾಗರಹಾವು ಎಡೆ ಬಿಚ್ಚಿದ್ದನ್ನು ನೋಡುವ ಬಯಕೆ. ಅವಳು ಪ್ರತಿನಿತ್ಯ ಈ ಹಾವುಗಳಿಗೆ ತಮ್ಮ ಹಸುವಿನ ಹಾಲನ್ನು ಕುಡಿಸುವ ಆಶೆ. ಅವಳಿಗೆ ಕಾಡಿನ ಹೂವುಗಳನ್ನು ಮುಡಿಯುವ ಆಶೆ. ಕಾರೆಹಣ್ಣು, ಬಾರೆಹಣ್ಣುಗಳನ್ನು ತಿನ್ನುವ ಬಯಕೆ. ಹೀಗೆ ಪ್ರತಿನಿತ್ಯ ಒಂದಲ್ಲ ಒಂದು ರೀತಿಯ ಬಯಕೆಗಳು ಅವಳನ್ನು ಕಾಡುತ್ತಿದ್ದವು. ಮಲ್ಲನಾಯಕ ತನ್ನ ಸತಿಯ ಈ ಬಯಕೆಗಳನ್ನು ಸಂತೋಷದಿಂದ ಪೂರೈಸುತ್ತಿದ್ದನು. ಈ ದಂಪತಿಗಳು ಎಂದಿನಂತೆ ತಮ್ಮ ದಿನ ನಿತ್ಯದ ಕೆಲಸ ಮುಗಿಸಿ ರಾತ್ರಿ ತಮ್ಮ ಗುಡಿಸಿಲಿನಲ್ಲಿ ಮಲಗಿರಲು ಆ ರಾತ್ರಿ ಬಾಳಾರ ಪಟ್ಟಮ್ಮನಿಗೆ ನಿದ್ರೆ ಬರಲಿಲ್ಲ. ಆಗ ಕಲ್ಲು ನೀರು ಕರಗುವ ಸಮಯದಲ್ಲಿ ಅಶರೀರವಾಣಿ ನುಡಿಯಿತು. "ನಿನ್ನ ಉದರದಲ್ಲಿ ಜನ್ಮ ತಾಳುವ ನಿನ್ನ ಕಂದ, ಜಗವನ್ನೆ ಸುತ್ಕಂಡು ಜಗತ್ತನ್ನೆ ಕಾಯ್ತಾನೆ. ಕೂಸ್ಗೇನು ಕೇಡಿಲ್ಲ ಕೂಸ್ನೆಂದು ಕಾಡಲ್ಲ. ಕೂಸುಟ್ಟಿ ಕುಲಕ್ಕೆ ಕೀರ್ತಿಯ ತರುತ್ತಾನೆ.ಪಾಶವ ಬಿಡಿಸ್ತಾನೆ. ಪಾಪವ ಕಳೀತಾನೆ. ಆದ್ರೂ ಹೆತ್ತ ತಾಯಿಯ ಎದೆ ಹಾಲನ್ನು ಕುಡಿಯುವುದಿಲ್ಲ. ಹುಟ್ಟುವ ನಿನ್ನ ಕಂದ ನಿನ್ನ ಮುಖವನ್ನು ನೋಡಲ್ಲಾ" ಈ ವಾಣಿಯನ್ನು ಪಟ್ಟಮ್ಮ ಕೇಳಿ ದಿಗ್ಭ್ರಾಂತಳಾದಳು. ಅಯ್ಯೋ ಶಿವನೇ ನೀನು ಕೊಟ್ಟ ಕಂದನನ್ನು ನೀನೇ ಕಸಿದುಕೊಳ್ಳುವೆಯಾ ಎಂದು ಜೋರಾಗಿ ಅಳುತ್ತಿರುವಾಗ ಮಗ್ಗಲಲ್ಲಿ ಮಲಗಿದ್ದ ಮಲ್ಲಯ್ಯನಿಗೆ ಎಚ್ಚರವಾಗಿ ಅಳುತ್ತಿರುವ ಹೆಂಡತಿಯನ್ನು ಕಂಡು ಏನು ಎಂದು ವಿಚಾರಿಸಿದಾಗ,

ಅಶರೀರವಾಣಿಯ ವಿಷಯವನ್ನು ತಿಳಿಸಿದಳು. ನಿನಗೆ ಯಾವಾಗಲೂ ಅದೇ ಚಿಂತೆ ಅದ್ದರಿಂದ ಹೀಗೆ ಭಾಸವಾಗಿದೆ. ಆ ದೇವರು ನಮ್ಮನ್ನು ಎಂದು ಕೈ ಬಿಡುವುದಿಲ್ಲ ಎಂದು ತನ್ನ ಹೆಂಡತಿಯನ್ನು ಸಮಾಧಾನಪಡಿಸಿದನು. ಬಾಳಾರಪಟ್ಟಮ್ಮಗೆ ನವಮಾಸಗಳು ತುಂಬಿದವು. ದಿನ ಕಳೆದು ದಿನ ತುಂಬಿ ಹೆರಿಗೆ ಆಗುವ ಕಾಲ ಹತ್ತಿರ ಬಂದಿತು. ಕಾಡಿನವಾಸಿಗಳಾದ ಇವರಿಗೆ ಹತ್ತಿರದಲ್ಲಿ ಹೆರಿಗೆ ಮಾಡಿಸುವವರು (ಸೂಲಗಿತ್ತಿಯರು) ಅಲ್ಲದೆ ಬಾಣಂತಿತನವನ್ನು ಮಾಡುವವರು ಯಾರೂ ಇರಲಿಲ್ಲ. ಪಟ್ಟಮ್ಮಳಿಗೆ ಹೆರಿಗೆ ನೋವು ಕಾಣಿಸಿಕೊಂಡು ಬೇಗ ಹೆರಿಗೆ ಆಗದಿದ್ದುದಕ್ಕೆ ಪಟ್ಟಮ್ಮನ ತಂದೆ ಚಿಂತಿಸುತ್ತಿರುವಾಗ ಮಗಳ ಹೊಟ್ಟೆಯೊಳಗಿನ ಶಿಶುಭ್ರೂಣವು "ತಾತ ನಾನು ಈ ಭೂಮಿಗೆ ಬರಬೇಕಾದರೆ ನನ್ನ ಅತ್ತೆಯಾದ ಪಚ್ಚಪದಿಪಾಲಮ್ಮನನ್ನು ಕರೆಯಿಸಿ" ಎಂದು ಶಿಶು ಮಾತನಾಡಿದಾಗ ತಾತನು ಹೌಹಾರಿದನು. ಈ ವಿಷಯ ತಿಳಿದ ಮಲ್ಲನಾಯಕ ವಿಧಿಯಿಲ್ಲದೆ ತನ್ನ ತಂಗಿಯನ್ನು ಕರೆತರಲು ಕ್ಯಾಸಪುರಕ್ಕೆ ಹೋದನು. ಭಾವ ಕ್ಯಾಸಯ್ಯ ಕ್ಯಾಸಪುರದ ಸುತ್ತಮುತ್ತಲಿನ ಪ್ರದೇಶದ ಜನರಿಗೆ ಒಡೆಯನಾಗಿದ್ದನು. ಯಾವುದೇ ಊರಿನ ಕೆಲಸ ಕಾರ್ಯಗಳು ನಡೆಯಬೇಕಾದರೆ ಕ್ಯಾಸಯ್ಯನ ಅನುಮತಿ ಪಡೆದೆ ಕೆಲಸ ನಿರ್ವಹಿಸಬೇಕಾಗಿತ್ತು.

ತನ್ನ ತಂಗಿ, ಭಾವ ಕ್ಯಾಸಯ್ಯ, ಮಲ್ಲನಾಯಕನನ್ನು ಆನಂದಿಂದ ಸತ್ಕರಿಸಿದರು. ಮಲ್ಲನಾಯಕ ತನ್ನ ಹೆಂಡತಿ ಗರ್ಭಧರಿಸಿರುವ ಹಾಗೂ ಹೆರಿಗೆ ನೋವಿನಿಂದ ನರಳುವ ವಿಷಯವನ್ನು ತಿಳಿಸಿದಾಗ ಪಾಲಮ್ಮ ಸಂತೋಷಗೊಂಡಳು. ತನ್ನ ಅಣ್ಣ ತನ್ನನ್ನು ಕರೆಯಲಿಕ್ಕೆ ಬಂದದ್ದು, ತನ್ನ ಅಣ್ಣನಿಗೆ ಮಕ್ಕಳ ಭಾಗ್ಯ ಲಭಿಸಿದ್ದು, ಅವಳಿಗೆ ಅಪಾರ ಆನಂದವನ್ನು ಉಂಟುಮಾಡಿತು. ತನ್ನ ಅತ್ತಿಗೆಯ ಹೆರಿಗೆ, ಬಾಣಂತಿತನವನ್ನು ಮಾಡುವ ಸಲುವಾಗಿ ತನ್ನ ತವರು ಮನೆಗೆ ಹೋಗುವ ನಿರ್ಧಾರ ಮಾಡಿದಳು. ಆದರೆ ಕ್ಯಾಸಯ್ಯನಿಗೆ ತನ್ನ ಹೆಂಡತಿಯನ್ನು ಕಳುಹಿಸಲು ಮನಸ್ಸು ಬರಲಿಲ್ಲ. ಏಕೆಂದರೆ ಪಾಲಮ್ಮ ತುಂಬಾ ಸೌಂದರ್ಯವತಿಯಾಗಿದ್ದಳು. ಕಾಡಿನ ಜೀವನ ನಡೆಸುವುದು ಅಲ್ಲಿಯ ಗಡ್ಡೆ, ಗೆಣಸು, ಹಣ್ಣು, ಹಂಪಲು ತಿನ್ನುವುದು ಕ್ಯಾಸಯ್ಯನಿಗೆ ಇಷ್ಟವಿರಲಿಲ್ಲ. ಅವಳು ಪುನಃ ಕಾಡಿಗೆ ಹೋದರೆ ಅವಳ ಸ್ಥಿತಿಗತಿಯಲ್ಲಿ ವ್ಯತ್ಯಾಸವಾಗಬಹುದು. ದುಷ್ಟ ಪ್ರಾಣಿಗಳಿಂದ ಏನಾದರೂ ತೊಂದರೆಯಾಗಬಹುದು. ಆದ್ದರಿಂದ ಪಾಲಮ್ಮಳನ್ನು ತವರಿಗೆ ಕಳುಹಿಸಲು ಸಾಧ್ಯವೇ ಇಲ್ಲ ಎಂದು ನಿಷ್ಠುರವಾಗಿ ಹೇಳಿದನು.

ತನ್ನ ಗಂಡನ ಮಾತುಗಳನ್ನು ಕೇಳಿ ಪಾಲಮ್ಮಳಿಗೆ ದುಃಖವಾಯಿತು. ಗಂಡನ ಮನೆಯಲ್ಲಿ ಎಷ್ಟೇ ಸುಖವಾಗಿದ್ದರೂ ತವರಿನ ಮಮತೆ, ಪ್ರೀತಿವಾತ್ಸಲ್ಯ, ಈ ಸಂಪತ್ತು ಸರಿದೂಗಿಸಲಾರದು. ಆ ಕಾಡಿನ ಜೀವನದ ಸುಖ ಇಲ್ಲಿ ದೊರೆಯಲಾರದು. ಆ ಗಿಡಮರಗಳು ಅಲ್ಲಿ ಚಿಲಿಪಿಲಿಗುಟ್ಟುತ್ತ ಹಾರಾಡುತ್ತಿರುವ ಹಕ್ಕಿ ಪಕ್ಷಿಗಳು, ಗಿಳಿ, ಕೋಗಿಲೆಗಳು ನೀರಿನಲ್ಲಿ ಆನಂದದಿಂದ ನಲಿದಾಡುತ್ತಿರುವ

ಮೀನುಗಳು, ಹಚ್ಚನೆಯ ಹಸಿರು ಹುಲ್ಲಿನಲ್ಲಿ ನಲಿಯುವ ಮೊಲಗಳು. ಹಸುವಿನ ಕರುಗಳ ಜಿಗಿತ ನೋಡಲು ಎಷ್ಟು ಆನಂದ. ಆ ಆನಂದ ಇಲ್ಲಿ ದೊರೆಯಲು ಸಾಧ್ಯವಿಲ್ಲ. ಅಂತಹ ಸೊಬಗನ್ನು ನೋಡಿ ಸಂತೋಷದಿಂದ ನಾಲ್ಕು ದಿವಸ ಕಾಲ ಕಳೆದು ಬರೋಣವೆಂದರೆ ನನ್ನ ಪತಿ ನನ್ನ ಮೇಲಿನ ಮಮತೆಯಿಂದ ಕಾಡಿಗೆ ಕಳುಹಿಸುವುದಿಲ್ಲವೆಂದು ಹೇಳುತ್ತಿದ್ದುದ್ದನ್ನು ಕೇಳಿ ಪಾಲಮ್ಮಳಿಗೆ ಇದರಿಂದ ತುಂಬ ವ್ಯಥೆಯಾಯಿತು. ಗಂಡನ ಮನೆಯಲ್ಲಿ ಅಷ್ಟೈಶ್ವರ್ಯಗಳಿದ್ದರೂ, ಹೆಣ್ಣಿಗೆ ಈ ಐಶ್ವರ್ಯ ತವರುಮನೆಯ ಒಟ್ಟಿಗೆ ಸಾಟಿಯಾಗಲಾರದು. ಹೀಗೆ ತನ್ನ ಗಂಡನ ಮಾತಿನಿಂದ ಕಣ್ಣೀರಿಟ್ಟಳು.

ಕೋರಲಮಲ್ಲನಾಯಕ ಎಷ್ಟು ವಿನಯದಿಂದ ಬೇಡಿದರೂ ಕ್ಯಾಸಯ್ಯನು ಪಾಲಮ್ಮನನ್ನು ಕಳುಹಿಸಲು ಒಪ್ಪಲಿಲ್ಲ. ಇದು ಮಲ್ಲನಾಯಕನ ಮನಸ್ಸಿಗೆ ನೋವನ್ನುಂಟು ಮಾಡಿತು. ಚಿಂತಾಕ್ರಾಂತವಾಗಿ ತನ್ನ ಸ್ಥಳಕ್ಕೆ ಹಿಂದಿರುಗಿ ಬರುತ್ತಿರುವಾಗ ಅದೇ ಊರಿನ 'ಗಳಗಂಟಗಾದಶೆಟ್ಟಿ' ಮಲ್ಲನಾಯಕನಿಗೆ ಎದುರಾದನು. ಇವನ ಮನಸ್ಸು ಅರಿತ ಶೆಟ್ಟಿ ವಿಚಾರಿಸಲಾಗಿ ನಡೆದ ವಿಚಾರವನ್ನು ಮಲ್ಲನಾಯಕ ಸವಿಸ್ತಾರವಾಗಿ ಅವನಿಗೆ ತಿಳಿಸಿದನು.

ಕೋರಮಲ್ಲನಾಯಕನ ಸ್ಥಿತಿಯನ್ನು ಕೇಳಿ ಗಳಗಂಟಗಾದಶೆಟ್ಟಿಯ ಕರುಳು ಹಿಂಡಿದಂತಾಯಿತು. ಎಂತವರಿಗೂ ತೊಂದರೆಗಳು ಬರುತ್ತವೆ. ಅದರಲ್ಲೂ ಮರದಲ್ಲಿ ಮರಹುಟ್ಟಬೇಕು. ಇಂತಹ ಪರಿಸ್ಥಿತಿಯಲ್ಲಿ ಕ್ಯಾಸಯ್ಯನು ಈ ರೀತಿ ಹೇಳಿರುವುದು ನ್ಯಾಯವಲ್ಲ. ಬಂಧುಬಳಗವೆಂದರೆ ಪತಕ್ಕೆ ಇರಬೇಕು. ಒಬ್ಬರ ಕಷ್ಟವನ್ನು ಮತ್ತೊಬ್ಬರು ಅರಿತುಕೊಳ್ಳದಿದ್ದ ಮೇಲೆ ನೆಂಟರೆನ್ನುವರು ಇದ್ದು ಪ್ರಯೋಜನವೇನು? ಕಾಡಿನಲ್ಲಿದ್ದ ಹುಡುಗಿಯನ್ನು ಅಪಹರಿಸಿಕೊಂಡು ಬಂದು ಇವರಿಗೆ ತೊಂದರೆ ಕೊಟ್ಟುದಲ್ಲದೆ, ಇಂತಹ ಸಂಕಷ್ಟ ಪರಿಸ್ಥಿತಿಯಲ್ಲಿ ಕಷ್ಟ ಸುಖಕ್ಕೆ ಆಗದಿದ್ದ ಮೇಲೆ ಇವನಿದ್ದು ಫಲ ಏನು? ಇವನ ಸುಖ ಸಂಪತ್ತು ದೌಲತ್ತು ಯಾರಿಗೆ ಬೇಕು? ಎಂದು ಯೋಚಿಸಿ ನಾಯಕರೆ ಬನ್ನಿ ನನ್ನ ಹಿಂದೆ ಇನ್ನೊಂದು ಸಾರಿ ಕ್ಯಾಸಯ್ಯನನ್ನು ವಿಚಾರಿಸೋಣ, ಅದರ ಮೇಲೆ ದೇವರಿದ್ದಾನೆ ಎಂದು ಕ್ಯಾಸಯ್ಯನ ನಿವಾಸಕ್ಕೆ ಪುನಃ ಕರೆ ತಂದನು.

ನಾಯಕನು ಸ್ವಾಮಿ, ನಮ್ಮ ಸಲುವಾಗಿ ತಮಗೇಕೆ ತೊಂದರೆ, ನನ್ನ ಭಾವ ಕ್ಯಾಸಯ್ಯ ನಿಷ್ಠುರವಾಗಿ ಹೇಳಿಬಿಟ್ಟಿದ್ದಾನೆ. ಈಗ ನಮ್ಮನ್ನು ಕರೆದುಕೊಂಡು ಬಂದನೆಂದು ಪುನಃ ಕೋಪಿಷ್ಠನಾಗಿ

ನಿಮ್ಮ ಮಾತಿಗೆ ಬೆಲೆ ಇಲ್ಲದಂತಾಗಿ ನಾನೆ ತಮ್ಮ ಮರ್ಯಾದೆಯನ್ನು ಕಳೆದಂತಾಗುತ್ತದೆ. ನನ್ನ ಅಣೆಬರಹದಲ್ಲಿ ಏನೇನು ಬರೆದಿದೆಯೋ ಅದೆಲ್ಲವೂ ಆಗಲಿ ನಾನು ಬರುತ್ತೇನೆ ಎಂದು ಹೊರಟನು. ಆಗ ಶೆಟ್ಟರು ನಾಯಕನನ್ನು ಸಮಾಧಾನಪಡಿಸಿ ತನ್ನ ಜೊತೆಯಲ್ಲಿ ಕ್ಯಾಸಯ್ಯನ ಬಳಿಗೆ ಕರೆದುಕೊಂಡು ಹೋದನು.

ಶೆಟ್ಟರು ಮಲ್ಲನಾಯಕರೊಡನೆ ಕ್ಯಾಸಯ್ಯನ ನಿವಾಸಕ್ಕೆ ಬಂದರು. ಶೆಟ್ಟರು ಕ್ಯಾಸಯ್ಯನಿಗೆ ಬುದ್ದಿವಾದ ಹೇಳಿದರು. ಶೆಟ್ಟರು ಸಾಮಾನ್ಯ ಮನುಷ್ಯರಾಗಿರಲಿಲ್ಲ. ಅವರು ಗ್ರಾಮದ ಹಿರಿಯರು; ಜನರ ಕಷ್ಟ ಸುಖಗಳಲ್ಲಿ ಭಾಗಿಯಾದವರು ಹಾಗೂ ಕ್ಯಾಸಯ್ಯನ ಅನೇಕ ಕಷ್ಟ ನಷ್ಟಗಳಲ್ಲಿ ಭಾಗಿಯಾದವರು ಪ್ರಾಮಾಣಿಕ ಮನುಷ್ಯ. ನುಡಿದಂತೆ ನಡೆಯುವವರು, ಇಂತಹ ವ್ಯಕ್ತಿಯ ಮುಂದೆ ಹೇಗೆ ಮಾತನಾಡಬೇಕೆಂದು ಕ್ಯಾಸಯ್ಯನಿಗೆ ಏನೂ ತೋಚದಂತಾಯಿತು.

ಶೆಟ್ಟರ ಮಾತಿಗೆ ಕ್ಯಾಸಯ್ಯನು ತನ್ನ ಹೆಂಡತಿಯನ್ನು ಮಲ್ಲನಾಯಕನ ಜೊತೆಯಲ್ಲಿ ಕಳುಹಿಸಲು ಒಪ್ಪಿದನು. ಆದರೆ ಶೆಟ್ಟರಿಗೆ ಭಾವ ಮಲ್ಲನಾಯಕನಿಗೆ ಒಂದು ಷರತ್ತು ಹಾಕಿದನು.

ಸ್ವಾಮಿ ಗಾದಿಶೆಟ್ಟರೇ ನನ್ನ ಪತ್ನಿಗೆ ಏನಾದರೂ ತೊಂದರೆಯಾದರೆ ನೀವು ನನ್ನ ಮನೆಯಲ್ಲಿ ನಿಮ್ಮ ಜೀವ ಇರುವ ತನಕ ಜೀತದಾಳಾಗಿ ದುಡಿಯಬೇಕು. ಈ ಷರತ್ತಿಗೆ ನೀವು ಒಪ್ಪಿದರೆ ನನ್ನ ಹೆಂಡತಿಯನ್ನು ಕಳುಹಿಸುತ್ತೇನೆ. ಹೆರಿಗೆ ಆದ ಕೂಡಲೇ ತಡಮಾಡದೆ ಹಿಂದಿರುಗಿ ಕರೆತಂದು ಬಿಡಬೇಕು ಈ ಷರತ್ತನ್ನು ಕ್ಯಾಸಯ್ಯನು ಒಡ್ಡಿದನು. ಕ್ಯಾಸಯ್ಯನು ತನ್ನ ಹೆಂಡತಿಗೆ ಏನಾದರೂ ತೊಂದರೆ ಬಂದರೆ ಆ ತಪ್ಪಿಗಾಗಿ ನಾನು ನಿನ್ನ ಮನೆಯಲ್ಲಿ ಜೀವನ ಪರ್ಯಂತ ಜೀತದಾಳಾಗಿ ದುಡಿಯುತ್ತೇನೆ. ಸೂರ್ಯ ಚಂದ್ರರಾಣೆ ಇದು ಸತ್ಯ. ನಾನೆಂದೂ ಈ ಮಾತಿಗೆ ತಪ್ಪುವುದಿಲ್ಲ. ಬೇಗನೇ ನಿನ್ನ ಹೆಂಡತಿಯನ್ನು ಕಳುಹಿಸಿಕೊಡು ಎಂದು ಶೆಟ್ಟಿಯು ಹೇಳಿದನು. 

ಗರ್ಭದಲ್ಲಿದ್ದ ಶಿಶುವು ಅತ್ತೆ ನೀನು ಮುಂದಲ ಸೂಲಗಿತ್ತಿನೊ ಅಥವಾ ಹಿಂದಲ ಸೂಲಗಿತ್ತಿನೋ ರಂಧ್ರಗಳಲ್ಲಿ ಎಲ್ಲಿ ಬರಲಿ, ನಾನು ಯಾವ ರೀತಿ ಭೂಮಿ ಸ್ಪರ್ಶ ಮಾಡಲಿ, ನಿನ್ನನ್ನು ಕೇಳಿ ಬರುವುದೆಂದು ಇಲ್ಲಿಯವರೆಗೆ ತಡೆದಿದ್ದೆ ಎಂದು ಆ ಶಿಶು ಕೇಳಿತು. ಆಗ ಅತ್ತೆಗೆ ಮತ್ತಷ್ಟು ಚಿಂತೆಯಾಯಿತು. ಎಲ್ಲಿಯಾದರೂ ಶಿಶುವು ಗರ್ಭದಿಂದ ಮಾತನಾಡುವುದುಂಟೆ ಎಂದು ಯೋಚಿಸಿ ಅಪ್ಪಾ ಎಲ್ಲಾ ಜೀವರಾಶಿಗಳೂ ಬರುವ ಮಾರ್ಗದಲ್ಲಿಯೇ ನೀನು ಸಹ ಬಾ ಎಂದು ಹೇಳಿದಳು. ಆದರೆ ಮಗು ಬ್ರಹ್ಮರಂಧ ಭೇದಿಸಿಕೊಂಡು ಕಾಲುಗಳನ್ನು ಮುಂದೆ ಮಾಡಿ ರಭಸದಿಂದ ಬರುತ್ತ ಎದುರಿಗೆ ಕೂತಿದ್ದ ಅತ್ತೆಯ ಬಾಯಿಗೆ ಝಾಡಿಸಿ ಒದ್ದಿತು. ಅ ಒದೆತಕ್ಕೆ ಪಾಲವ್ವ ಮಾರು ದೂರ ಹೌಹಾರಿ ಬಿದ್ದಳು. ಅಲ್ಲದೇ ಅವಳ ಬಾಯೊಳಗಿನ ನಾಲ್ಕು ಹಲ್ಲುಗಳು ಉದುರಿ ಬಿದ್ದವು.

ಮಗುವು ಗಂಡು ಮಗುವಿನ ರೂಪದಲ್ಲಿ ಇರದೆ ಗುಂಡು ಗುಂಡಾಗಿ ಗುಂಡು ಕಲ್ಲಿನಂತೆ ಬಿದ್ದು ಕೊಂಡಿತು. ಈ ದೃಶ್ಯವನ್ನು ಕಂಡ ಬಳಾರಪಟ್ಟಣಮ್ಮ ಮತ್ತು ಪಾಲಮ್ಮ ಬೆದರಿಹೋದರು. ಇದೆಂಥ ವಿಚಿತ್ರ ಘಟನೆ. ಆಗ ತಾನೆ ಜನಿಸಿದ ಮಗುವಿಗೆ ಅಷ್ಟು ಶಕ್ತಿ ಹೇಗೆ ಬಂತು. ಹುಟ್ಟಿದ ಮಗು ಕಾಲಿನಿಂದ ಝಾಡಿಸಿ ಒದೆಯುವುದೆಂದರೇನು? ಹಲ್ಲು ಮುರಿದು ಬೀಳುವುದೆಂದರೇನು? ಮಾನವ ಮಗುವಿಗೆ ಈ ಶಕ್ತಿ ಬರಲು ಸಾಧ್ಯವೇ? ಇದು ಸಾಮಾನ್ಯ ಮಗುವಲ್ಲ. ಯಾವುದೋ ಭೂತವೋ

ಪ್ರೇತವೋ, ಪಿಶಾಚಿಯೋ. ಯಾವ ಕೇಡಿಗೆ ಹುಟ್ಟಿದೆಯೋ ಇದಂತು ಮಗುವಲ್ಲ. ಮನುಷ್ಯ ರೂಪದ ಭೂತವೇ ಇದು. ಈ ಮಗುವು ನಮಗೆ ಬೇಡವೇ ಬೇಡ. ಎಂದು ನಡೆದ ವಿಚಾರವನ್ನೆಲ್ಲ ಮಲ್ಲನಾಯಕನಿಗೆ ತಿಳಿಸಿದರು. ಕುರೂಪಿಯಾದ ತನ್ನ ತಂಗಿಯನ್ನು ನೋಡಿ ಮಲ್ಲಿನಾಯಕ ಭಯಭೀತನಾದನು. ಈಗ ನನ್ನ ತಂಗಿಯ ಗತೀಯೇನು? ಗಳ ಗಂಟನಾದ ಶೆಟ್ಟರ ಗತೀಯೇನು? ಸಾಯುವತನಕ ಆ ಕ್ಯಾಸಯ್ಯನ ಮನೆಯಲ್ಲಿ ಜೀತದಾಳಾಗಿ ದುಡಿಯಬೇಕು. ಈ ಪಿಶಾಚಿಯ ಹುಟ್ಟಿನಿಂದ ಎಲ್ಲರಿಗೂ ತೊಂದರೆಯಾಯಿತು. ನಾವು ಏನು ತಪ್ಪು ಮಾಡಿದ್ದೇವೋ, ಏನು ಪಾಪ ಮಾಡಿದ್ದೇವೋ ದೇವರು ಈ ಪೀಡೆಯನ್ನು ನಮಗೆ ಕೊಟ್ಟಿದ್ದಾನೆ ಎಂದು ದುಃಖಪಟ್ಟರು.

ನಂತರ ತನ್ನ ತಂಗಿಯನ್ನು ಗಂಡನ ಮನೆಗೆ ಸೇರಿಸಲು ಮಲ್ಲನಾಯಕ ತಂಗಿಯನ್ನು ಕರೆದುಕೊಂಡು ಹೋದನು. ಕ್ಯಾಸಯ್ಯ ತನ್ನ ಹೆಂಡತಿಯ ಭೀಕರ ಸ್ವರೂಪವನ್ನು ನೋಡಿ ದುಃಖಿತನಾಗಿ ಹೌಹಾರಿದನು. ಕುರೂಪಿಯಾದ ತನ್ನ ಹೆಂಡತಿಯನ್ನು ಮನೆಗೆ ಸೇರಿಸಿಕೊಳ್ಳಲಿಲ್ಲ. ಮಲ್ಲನಾಯಕನಿಗೆ ಕಠಿಣ ಶಿಕ್ಷೆಯನ್ನು ಕೊಡಿಸಿದನು. ಶೆಟ್ಟಿಯನ್ನು ತನ್ನ ಮನೆಯ ಜೀತದಾಳನ್ನಾಗಿ ಮಾಡಿಕೊಂಡನು. ಇದಕ್ಕೆಲ್ಲ ಹುಟ್ಟಿದ ಮಗುವೆ ಕಾರಣ. ಇದರ ಸಹವಾಸ ನಮಗೆ ಬೇಡ. ಇದು ಮಗುವೋ, ಪಿಶಾಚಿಯೋ, ಭೂತವೋ, ಯಾವುದೇ ಆಗಿರಲಿ. ಈ ಶಿಶುವನ್ನು ಕೊಂದು ಶಿಶುಹತ್ಯೆ ಪಾಪಕಟ್ಟಿಕೊಳ್ಳುವುದು ಬೇಡ. ಮಗುವನ್ನು ಇಲ್ಲಿಯೇ ಎಲ್ಲಿಯಾದರೂ ಒಂದು ಗಿಡದಲ್ಲಿ ಮಲಗಿಸಿ ನಾವು ಈ ಸ್ಥಳದಿಂದ ದೂರ ಹೋಗಿ ಬಿಡೋಣ ನಾವು ಇಲ್ಲಿಯೇ ಇದ್ದರೆ ಈ ಮಗುವು

ನಮ್ಮ ಬೆನ್ನ ಹತ್ತಿ ನಮಗೆ ತೊಂದರೆ ಕೊಡಬಹುದು. ಎಂದು ಮಗುವನ್ನು ಕೋರಿ ಕಂಬಳಿಯಲ್ಲಿ ಸುತ್ತಿಕೊಂಡು ಒಂದು ನದಿಯ ದಡದ ಗಿಡದ ನೆರಳಿನಲ್ಲಿ ಮಲಗಿಸಿ, ಮಗುವನ್ನು ಅಲ್ಲೆ ಬಿಟ್ಟು, ಬೇಡ ಗಂಪಳವನ್ನು ಎಬ್ಬಿಸಿಕೊಂಡು ಮೂಡುದಿಕ್ಕಿನ ಕಡೆಗೆ ಅಂದರೆ ಸಾಣಿಕೆರೆ ಸೀಮೆಯನ್ನು ಸೇರಿದರು. ಕೋರ್ಲಮಲ್ಲನಾಯಕ ತನ್ನ ಕಂಬಳಿಕೊರಿಯಲ್ಲಿ ಮಗುವನ್ನು ಸುತ್ತಿ ಎಲೆಗಳನ್ನು ಹೆಣೆದು, ಅದರ ಮೇಲೆ ಮಲಗಿಸಿ, ಗಿಡದ ನೆರಳಿನಲ್ಲಿ ಬಿಟ್ಟು ಹೋರಟು ಹೋದ ನಂತರ ಗಾಳಿ ಬಿಸಿಲುಗಳ ಹೊಡೆತದಿಂದ ಮಗು ಗಿಡದಡಿಯಲ್ಲಿ ಒಂದೇ ಸವನೆ ಅಳತೊಡಗಿತು.

ಈ ಸಮಯಕ್ಕೆ ಕೈಲಾಸವಾಸಿಗಳಾದ ಪಾರ್ವತಿ, ಪರಮೇಶ್ವರ ಸೃಷ್ಟಿಯ ಸ್ಥಿತಿಗತಿಗಳನ್ನು ತಿಳಿಯಲು ನಂದಿಯನ್ನೇರಿ ಅಕಾಶ ಮಾರ್ಗವಾಗಿ ಬರುತ್ತಿರುವಾಗ ಕಾಡಿನಲ್ಲಿ ಗುಂಡುಕಲ್ಲಿನಾಕಾರವಾಗಿದ್ದ ಮಗುವಿನ ಆಕ್ರಂದನ ಪಾರ್ವತಿಗೆ ಕೇಳಿಸಿತು. ಮಗುವಿನ ಆಕ್ರಂದನ ಕೇಳಿ ಬರುತ್ತದೆ. ಆದರೆ ಎಲ್ಲಿಯೂ ಮಾನವರ ಸುಳಿವು ಕಾಣುತ್ತಿಲ್ಲ. ನೋಡಿಕೊಂಡು ಹೋಗೋಣವೇ ಎಂದು ಶಿವನನ್ನು ಕೇಳಿದಳು. ಲೋಕ ರಕ್ಷಕನೂ, ಸರ್ವಾಂತರ್ಯಾಮಿಯೂ ಆದ ಪರಮಾತ್ಮನಿಗೆ ಈ ಮಗುವಿನ ಭವಿಷ್ಯ ತಿಳಿಯದೇ ಇದ್ದಿತೇ? ಅದರೂ ಸಹ ಪರಶಿವನು ಪಾರ್ವತಿಯನ್ನು ಕುರಿತು ಈ ಕಾಡಿನಲ್ಲಿ ಅನೇಕ ಜೀವರಾಶಿಗಳಿವೆ.

ಅವುಗಳ ಚಿಂತೆ ನಮಗೇಕೆ? ಮುಂದೆ ಹೋಗೋಣ ನಡೆ ಎಂದು ನುಡಿಯಲು ಹೆಣ್ಣುಕರುಳಿನ ಪಾರ್ವತಿಯು ಸ್ವಾಮಿ ನನಗೇಕೋ ಆ ಮಗುವಿನ ರೋದನ ಕೇಳಿ ಕರುಳು ಹಿಚುಕಿದಂತಾಗುತ್ತದೆ. ಏನೇ ಆಗಲಿ ಆ ಮಗುವನ್ನು ನೋಡಲೇ ಬೇಕು ನಡೆಯಿರಿ ಹೋಗೋಣ ಎಂದು ಹೇಳಿದಳು. ಪಾರ್ವತಿ ಪರಮೇಶ್ವರರು ಮಗುವಿದ್ದಲ್ಲಿಗೆ ಬಂದರು.

ದಟ್ಟವಾದ ಕಾಡು ಸುತ್ತ ಮುತ್ತಲೂ ನೋಡಿದರು. ಮಾನವರ ಸುಳಿವಿಲ್ಲ, ಮನೆ ಮಠಗಳಿಲ್ಲ, ಇಂತಹ ನಿರ್ಜನವಾದ ಪ್ರದೇಶದಲ್ಲಿ ಗಿಡದ ನೆರಳಿನಲ್ಲಿ ಕೋರಿಸುತ್ತಿರುವ ಮಗು ಎಲೆಯ ಮೇಲೆ ಇದೆಂತಹ ವಿಚಿತ್ರ ! ಈ ಮಗುವನ್ನು ಹೆತ್ತ ತಂದೆ ತಾಯಿಗಳು ಎಂಥ ನೀಚರಿರಬಹುದು. ಈ ಭೂಮಂಡಲದಲ್ಲಿ ಎಂತಹ ನಿರ್ದಯಿಗಳು ಇದ್ದಾರೆ. ಇದೇನು ಹುಲ್ಲು ಬೀಜವೆಂದು ಭಾವಿಸಿದ್ದಾರೆಯೇ ಸ್ವಾಮಿ ಈ ಮಗುವಿನ ಸ್ಥಿತಿಯನ್ನು ನೋಡಿದಿರಾ ಬಿಸಿಲು, ಮಳೆ, ಚಳಿಗಳಲ್ಲಿ ಇದರ ಸ್ಥಿತಿ ಏನಾಗಬೇಕು. ಎಂದು ಪಾರ್ವತಿ ಪರಶಿವನಲ್ಲಿ ಮೊರೆಯಿಟ್ಟಳು. ಪರಶಿವನು ನಗುತ್ತ ದೇವಿ ಎಲ್ಲವೂ ವಿಧಿನಿಯಮ. ಈ ಮಗು ಪರದೇಶಿ ಪಾಪಿಯಾಗಿದ್ದರೂ ಈ ಮಗುವು ಸಾಮಾನ್ಯ ಮಗುವಲ್ಲ, ಸಚ್ಚಾರಿತ್ರನಾಗಿ ಸಕಲರಿಂದ ಪೂಜಿಸಿಕೊಳ್ಳುವ ಯೋಗ ಉಳ್ಳವನಾಗುತ್ತಾನೆ. ಸಿದ್ಧಿ ಪುರುಷನಾಗಿ, ಮ್ಯಾಸ ಬೇಡರ ಬುಡಕಟ್ಟಿಗೆ ಅದರ್ಶ ಪುರುಷನಾಗಿ ಮಾನವ ಕುಲಕ್ಕೆ ಕಲ್ಪವೃಕ್ಷನಾಗಿ ಬೆಳೆದು ಲೋಕಕಲ್ಯಾಣ ಮಾಡುವವನಾಗು ತ್ತಾನೆ. ಈತನಿಂದ ದುರ್ಗಮ್ಮನ ಕೆರೆಯ ಹಿಂದೆ ಹುತ್ತದಲ್ಲಿ ಇರುವ ನಾಗೇಂದ್ರನ ಶಾಪ ವಿಮೋಚನೆಯಾಗುತ್ತದೆ. ಇವನು ಜಾತಿ ಕುಲ ಗೋತ್ರವನ್ನು ಮರೆತು ಆದರ್ಶ ಪುರುಷನಾಗಿ ಮೆರೆಯುವನು. ಭಕ್ತ ಬಾಂಧವನೆಂಬ ಬಿರುದಿನಿಂದ ಪ್ರಸಿದ್ಧಿ ಪವಾಡ ಪುರುಷನಾಗುತ್ತಾನೆ. ಈ ಮಗು ನೆಲಸಿದ ಕ್ಷೇತ್ರ ಪುಣ್ಯ ಕ್ಷೇತ್ರವಾಗುತ್ತದೆ. ಈ ಮಗು ಪ್ರಪಂಚಕ್ಕೆ ಬರುವಾಗಲೇ ಪವಾಡ ತೋರಿಸಿದೆ. ಇವನ ಮಹಿಮೆಯನ್ನರಿಯದ ತಾಯಿ ತಂದೆಯರು ಭೂತ ಪ್ರೇತವೆಂದೂ ಹೆದರಿ ಈ ಮಗುವನ್ನು ಅನಾಥನನ್ನಾಗಿ ಬಿಟ್ಟು ಹೋಗಿದ್ದಾರೆ ಎಂದು ಆ ಮುಗುವಿನ ಚರಿತ್ರಯನ್ನು ಪಾರ್ವತಿಗೆ ತಿಳಿಸಿದನು. ಪಾರ್ವತಿದೇವಿಯು ಆನಂದಭರಿತಳಾಗಿ ಸ್ವಾಮಿ ಈ ಮಗುವಿಗೆ ತಂದೆ ತಾಯಿಗಳಾರು ಇಲ್ಲದೇ ಪರದೇಶಿಯಾಗಿ ಈ ಕಾಡಿನಲ್ಲಿ ಸೂರ್ಯಕಿರಣಗಳಡಿಯಲ್ಲಿ ಪಾಪಿಯಂತೆ ಬೆಳೆಯುತ್ತಿರುವ ಇವನಿಗೆ ನಾಮಕರಣ ಮಾಡುವವರು ಯಾರು ಇಲ್ಲ. ಆದ ಕಾರಣ ನಾವೇ ಈ ಮಗುವಿಗೆ ಹೆಸರನ್ನಿಟ್ಟು ಹೊಗೋಣ ಎಂದು ಭಿನ್ನವಿಸಿಕೊಂಡಳು. ಪರಶಿವನು ದೇವಿ ಈ ಮಗುವು ಪರದೇಶಿಯಾಗಿದ್ದರಿಂದ 'ಪರದೇಶಿ ಪಾಪನ್ನ' ಎಂದು ನಾಮಕರಣ ಮಾಡುವುದಾಗಿ ಪಾರ್ವತಿಗೆ ಹೇಳಿದನು. ಸೂರಮ್ಮನ ಹಳ್ಳಿಯ ಬಟ್ಲಯ್ಯನರ ಗಟ್ಟಯ್ಯ ಮತ್ತು ಪುಂಡಣ್ಣರ ಗಟ್ಟಯ್ಯ ಇವರು ಹೇಳಿದಂತೆ ಪರಶಿವನು ಇವನು ಪರದೇಶಿಯಂತೆ ಪಾಪದ ಮಗುವಿನಂತೆ ಸೂರ್ಯನ ಕಿರಣಗಳಡಿಯಲ್ಲಿ ದಟ್ಟವಾದ ಕಾಡಿನಲ್ಲಿ, ನಿರ್ಜನ ಪ್ರದೇಶದಲ್ಲಿ ಬೆಳೆಯುತ್ತಿರುವುದರಿಂದ ಇವನನ್ನು ಸೂರ್ಯಪಾಪನಾಯಕ ಎಂದು ನಾಮಕರಣ ಮಾಡಿದರು. ಮುಂದೆ ಇವನು ಜಗಳೂರು ಪಾಪನಾಯಕ,

ಸೂರ್ಯದೇನ್ನಪಾಪನಯಕ, ಜಗಳೂರಜ್ಜ, ಎಂದು ಹೆಸರು ಪಡೆದು ಪ್ರಸಿದ್ಧಿ ಪಡೆದನು. ಮುಂದೆ ಪಾರ್ವತಿ ದೇವಿಯು ಹಸಿರು ಎಲೆಗಳಿಂದ ತೊಟ್ಟಿಲನ್ನು ಹೆಣೆದು, ಬಳ್ಳಿಯಿಂದ ಹಗ್ಗವನ್ನು ಹೆಣೆದು ಮರಕ್ಕೆ ತೊಟ್ಟಿಲನ್ನು ಕಟ್ಟಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಶಿಶುವಿಗೆ ನೆರಳು ಮಾಡಿ ಮರದ ಮೇಲೆ ನಡುವೆ ಜೇನು ಕಟ್ಟಿದಳು. ಅಲ್ಲಿಂದ ಜೇನಿನ ಹನಿ ತೊಟ್ಟಿಕ್ಕಿ ಮಗುವು ಅದನ್ನು ಚಪ್ಪರಿಸಿ ಬೆಳೆಯತೊಡಗಿತು. ಈ ಮಗುವು ದಿನ ದಿನಕ್ಕೆ ಬೆಳೆಯುತ್ತಿರುವಾಗ ಯಾವ ಅಡೆ ತಡೆಗಳಾಗಲಿ ಹಸಿವು ಬಾಯಾರಿಕೆಗಳಾಗಲಿ ಕ್ರಿಮಿ, ಕೀಟ, ಪಶು ಪಕ್ಷಿ ಮೃಗಗಳಾದಿಯಾಗಿ ಯಾರಿಂದಲೂ ಅಪಾಯ ಬಾರದಿರಲೆಂದು ಅಶೀರ್ವದಿಸಿ ಪಾರ್ವತಿಯರು ತಮ್ಮ ನಿವಾಸಕ್ಕೆ ನಿರ್ಗಮಿಸಿದರು.

**ಪಾಪನಾಯಕನ ಬೆಳವಣಿಗೆ ಮತ್ತು ಪವಾಡಗಳು**

ಶಿವ ಪಾರ್ವತಿಯರ ಮಹಿಮೆ ಎಂಬಂತೆ ಓರೆಗಲ್ಲು ಪಟ್ಟಣದಿಂದ ಮುದುಕಿ ಮಲ್ಲಜ್ಜಿ ಕಟ್ಟಿಗೆ ಆರಿಸಲೆಂದು ಬರುತ್ತಿರುವಾಗ ಮರದಲ್ಲಿ ತೊಟ್ಟಿಲಿನಲ್ಲಿದ್ದ ಮಗುವನ್ನು ಕಂಡು ಆನಂದಭರಿತಳಾದಳು. ನಾಗರಹಾವು ತನ್ನ ಹೆಡೆ ಬಿಚ್ಚಿ ಕಂದನಿಗೆ ನೆರಳಾಗಿ ನಿಂತಿದೆ. ಮರದಲ್ಲಿಯ ಜೇನು ಹಸಿದ ಕಂದನ ಬಾಯಿಗೆ ಬೀಳುತ್ತದೆ. ಇದನ್ನು ಕಂಡ ಮಲ್ಲಜ್ಜಿ ಅಶ್ಚರ್ಯಚಕಿತಳಾದಳು. ಯಾರಾದರೂ ಸುತ್ತ ಮುತ್ತಲು ಇರಬಹುದು. "ನಾಗಪ್ಪ ಹೆಡೆ ಬಿಚ್ಕೊಂಡು ನೆರಳು ಮಾಡೈತೆ. ಬಾಯಲ್ಲಿ ಈ ಜೇನು ಸುರಿತೈತೆ. ಜಗತ್ನಾಗಿಲ್ಲದ ಸೋಜಿಗಪ್ಪ" ಎಂದು ಮಲ್ಲಜ್ಜಿ ತನ್ನಲ್ಲಿ ಮಾತನಾಡಿಕೊಳ್ಳುತ್ತ ಮೊದಲೇ ಮಕ್ಕಳಿಲ್ಲದೇ ಜೀವನದಲ್ಲಿ ನೊಂದು ಬೆಂದಿದ್ದಳು. ಆ ಮಗುವನ್ನು ಮನೆಗೆ ಎತ್ತಿಕೊಂಡು ಬಂದು ಜೋಪಾನ ಮಾಡಿ ಬೆಳೆಸಿದಳು. ಪಾಪನಾಯಕ ಮಲ್ಲಜ್ಜಿಯ ಆಸೆಯ ಮಗುವಾಗಿ ಬೆಳೆಯ ತೊಡಗಿದ. ಮಗುವು ಹುಣ್ಣಿಮೆಯ ಚಂದ್ರನಂತೆ ಬೆಳೆಯುತ್ತಾ ಬಂದಿತು. ದೈವ ಕೃಪೆಯಿಂದ ಅವನಿಗೆ ಯಾವುದೇ ಬಾದೆಗಳು ಇಲ್ಲದೇ ಸುರಕ್ಷಿತವಾಗಿದ್ದನು. ಮಗುವು ಮಲ್ಲಜ್ಜಿಯ ಜೊತೆ ಕಾಡಿಗೆ ಹೋದಾಗ ಹುಲಿ ಚಿರತೆಗಳೊಂದಿಗೆ ಆಟವಾಡುವುದು. ಬೆಳೆಯುವ ಸಿರಿ ಮೊಳಕೆಯಲ್ಲಿ ಎನ್ನುವಹಿತೆ ಜಗಳೂರು ಪಾಪನಾಯಕ ಬೆಳೆಯತೊಡಗಿದ. ವಿಷ ಸರ್ಪಗಳನ್ನು ಹಿಡಿದು ಅವುಗಳೊಂದಿಗೆ ಚೆಲ್ಲಾಟವಾಡುವುದು. ಹಳ್ಳ ಕೊಳ್ಳಗಳಲ್ಲಿ ಮುಳುಗಿ ಈಜಾಡುವುದು. ಈ ರೀತಿ ಚಿಕ್ಕಂದಿನಿಂದಲೂ ಪವಾಡ ಪುರುಷನಾಗಿ ಬೆಳೆಯುತ್ತಾ ಬಂದನು. ಕಾಡಿನಲ್ಲಿ ಸಂಚರಿಸುತ್ತಿದ್ದ ಇವನಿಗೆ ಬಟ್ಟೆ ಬರೆಗಳಿರದೆ ಬರಿ ಮೈಯಿಂದ ಓಡಾಡುತ್ತ, ತಂದೆ ತಾಯಿಗಳು ಹೊದಿಸಿ ಹೋಗಿದ್ದ ಕೋರಿಯನ್ನು ಎರಡು ಭಾಗ ಮಾಡಿ ಒಂದು ತುಂಡನ್ನು ಲಂಗೋಟಿಗೆ ಉಪಯೋಗಿಸಿಕೊಂಡು ಮತ್ತೊಂದು ತುಂಡನ್ನು ತನ್ನ ಹೆಗಲ ಮೇಲೆ ಹಾಕಿಕೊಂಡು ತಿರುಗಾಡುತ್ತಿದ್ದನು.

ಪರದೇಶಿ ಪಾಪಯ್ಯ ಎಂಬ ಇದು ತೆಲುಗಿನ ಹಾಡಿನಲ್ಲಿದೆ. ಈ ರೀತಿಯಾಗಿ ಪಾಪನಾಯಕ ದಿನದಿಂದ ದಿನಕ್ಕೆ ಬೆಳೆಯುತ್ತ ಆರೇಳು ವರ್ಷದ ಬಾಲಕನಾದನು. ಇವನು ಕಾಡಿನಲ್ಲಿ ಸಂಚರಿಸುತ್ತಿರುವಾಗ

ಕಾಡಿನ ದನಗಾಹಿ ಹುಡುಗರೊಂದಿಗೆ ಆಟವಾಡುತ್ತ ಅವರಿಗೆ ಹಣ್ಣು ಹಂಪಲಗಳನ್ನು ಕೊಡುವುದು, ಮುಳ್ಳು ಬೇಲಿಯಲ್ಲಿ ಕುಳಿತುಕೊಳ್ಳುವುದು ಹಾಗೆಯೇ ಮಾಯವಾಗುವುದು, ಮುಂತಾದ ಪವಾಡಗಳನ್ನು ಮಾಡುತ್ತಿದ್ದನು. ಇದು ಓರೆಗೆಯ ಹುಡುಗರಿಗೆ ಆಶ್ಚರ್ಯವನ್ನುಂಟು ಮಾಡುತ್ತಿತ್ತು. ಇವನ ಪವಾಡಗಳಿಂದ ದಿನ ದಿನಕ್ಕೆ ನೋಡುವ ಹುಡುಗರ ಸಂಖ್ಯೆ ಬೆಳೆಯಿತು. ಆದರೆ ಪಾಪನಾಯಕನಿಗೆ ಉಂಡಾಡಿಯಾಗಿ ಕಾಲ ಕಳೆಯಲು ಇಚ್ಛೆ ಉಂಟಾಗಲಿಲ್ಲ. ಆದ್ದರಿಂದ ಚಿಕ್ಕವನಾಗಿದ್ದರೂ ಸಹ ಆ ಪಟ್ಟಣದ ಎಲ್ಲಾ ರೈತರನ್ನು ಭೇಟಿಮಾಡಿ ಅವರ ದನಗಳನ್ನು ಕಾಯುವ ಕಾರ್ಯ ನಿರ್ವಹಿಸಿಕೊಂಡನು. ಒಂದು ಕರುವಿಗೆ ಒಂದು ದುಗ್ಗಾಣಿಯಂತೆ ಕೂಲಿಗೆ ಒಪ್ಪಿಕೊಂಡು, ಪ್ರತಿದಿನವೂ ಕರುಗಳನ್ನು ಹೊಡೆದುಕೊಂಡು ಚಳ್ಳಕೆರೆ ಸಮೀಪದ ಗೊರ್ಲಕಟ್ಟೆ ಪ್ರದೇಶದಲ್ಲಿ ಹರಿಯುತ್ತಿದ್ದ ಹಳ್ಳದ ದಂಡೆಯಲ್ಲಿ ಕಲ್ಲುಗುಂಡುಗಳ ಮಟ್ಟಿ ಬಯಲಿನಲ್ಲಿ ಒಂದು ರೊಪ್ಪವನ್ನು ಹಾಕಿಕೊಂಡು, ಕರುಗಳನ್ನು ಹಗಲೆಲ್ಲಾ ರೊಪ್ಪದಲ್ಲಿ ಕೂಡಿಹಾಕಿ, ಸಾಯಂಕಾಲ ಕರುಗಳನ್ನು ರೊಪ್ಪದಿಂದ ಹೊರಡಿಸಿ, ಹಳ್ಳದಲ್ಲಿ ನೀರು ಕುಡಿಸಿ, ಹೊಡೆದುಕೊಂಡು ಹೋಗಿ ಅವರವರ ಮನೆಗೆ ಬಿಡುತ್ತಿದ್ದನು. ಕರುಗಳಿಗೆ ಎಳೆ ಹುಲ್ಲನ್ನು ತಂದು ರೊಪ್ಪದಲ್ಲಿ ಹಾಕುತ್ತಿದ್ದನು.

**ಪಾಪನಾಯಕನಿಂದ ಬಿಡುಗಡೆಯಾದ ಸರ್ಪ**

ಪಾಪನಾಯಕ ದುರ್ಗಮ್ಮನ ಕೆರೆ ಹತ್ತಿರ ದನಕರು ಮೇಯಿಸುತ್ತಿರಬೇಕಾದರೆ, ಕೆರೆಯ ಹಿಂದಿರುವ ದೊಡ್ಡ ಹುತ್ತದಲ್ಲಿ ಸರ್ಪವೊಂದು ಆರ್ಭಟಿಸುತ್ತಿತ್ತು. ಹುತ್ತದ ಮೇಲಿದ್ದ ಮಂಗಾರಿ ಗಿಡದ ಬೇರುಗಳು ಹುತ್ತದಲ್ಲಿ ಇಳಿದು ಒಳಗಡೆಯಲ್ಲಿ ವಾಸವಾಗಿದ್ದ ಏಳು ಹೆಡೆ ಸರ್ಪದ ಕಿವಿಯಲ್ಲಿ ಹಾದು ಭೂಮಿಯ ಒಳಗೆ ಇಳಿದಿದ್ದವು. ಬೇರುಗಳು ಬಲಿತಂತೆಲ್ಲಾ ಸರ್ಪಕ್ಕೆ ಬಾದೆವುಂಟಾಗುತ್ತಿತ್ತು. ಅದಕ್ಕೆ ಉಂಟಾಗುತ್ತಿದ್ದ ಬಾಧೆ ಹೇಳತೀರದು, ಒಳಗೊಳಗೆ ನೋವನ್ನು ಅನುಭವಿಸುತ್ತಾ ಸರ್ಪ ಕಾಲ ಕಳೆಯುತ್ತಿತ್ತು.

ಪಾಪನಾಯಕ ದನಕರುಗಳನ್ನು ಕಾಯುತ್ತಿರುವಾಗ ಕರುಗಳು ಅತ್ತ ಇತ್ತ ಓಡಲಾರಂಭಿಸಿದವು. ಅವುಗಳನ್ನು ಒಂದೆಡೆ ಕೂಡಿಸಲು ಒಂದು ಕೋಲು ಬೇಕಿತ್ತು. ಎಲ್ಲಾ ಗಿಡಗಳನ್ನು ನೋಡಿದ. ಆದರೆ ಯಾವುದೇ ಗಿಡದಲ್ಲಿ ನೀಳವಾದ ಕೋಲು ಸಿಗಲಿಲ್ಲ. ಕೊನೆಗೆ ದೊಡ್ಡ ಹುತ್ತದ ಮೇಲೆ ಬೆಳೆದಿದ್ದ ಮಂಗಾರಿ ಗಿಡದ ಕೋಲು ನೇರವಾಗಿ ಇದ್ದಿದ್ದು ಕಂಡಿತು. ಆಗ ಅದರ ಬಳಿ ಬಂದನು. ಹುತ್ತದೊಳಗೆ ಒಂದು ರೀತಿಯ ಆಕ್ರಂದನ ಶಬ್ಧ ಕೇಳಿಸಿತು. ಇದನ್ನು ನೋಡಲೇ ಬೇಕೆಂದು ಕೈಯಿಂದಲೇ ಕಿತ್ತುಬಿಡೋಣವೆಂದು ಗಿಡದ ಮಧ್ಯ ಭಾಗಕ್ಕೆ ಕೈಹಾಕಿ, ತನ್ನ ಕಾಲುಗಳನ್ನು ಹುತ್ತಕ್ಕೆ ಬಿಗಿಯಾಗಿ ಒತ್ತಿ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಗಿಡವನ್ನು ಕಿತ್ತನು. ದೈವಕೃಪೆಯಿಂದ ಗಿಡವು ಬೇರು ಸಹಿತ ಕಿತ್ತು ಬಂದಿತ್ತು ಸರ್ಪಕ್ಕೆ ಬಾದೆ ತಪ್ಪಿತು. ಇನ್ನೊಂದು ಪಾಠಾಂತರದಿಂದ ಇದರ ಕಥೆ ಈ ರೀತಿಯಿದೆ. ಮುದಿಸರ್ಪದ ಮೇಲೆ ಮಂಗಾರಿ ಗಿಡ ಬೃಹದಾಕಾರವಾಗಿ ಬೆಳೆದು ಅದರ ಮುಳ್ಳುಗಳು ಸರ್ಪಕ್ಕೆ

ಬಾದೆ ಕೊಡುತ್ತಿದ್ದವು. ನೋವಿನಿಂದ ನರಳುತ್ತಿದ್ದ ಸರ್ಪದ ಮೇಲೆ ಪಾಪನಾಯಕನಿಗೆ ಕರುಣೆ ಉಂಟಾಯಿತು. ಪಾಪನಾಯಕ ಅದರ ಮೇಲಿದ್ದ ಗಿಡವನ್ನು ಕಿತ್ತು ಬಿಸಾಡಿದ. ಸರ್ಪಕ್ಕೆ ಶಾಪ ನಿವಾರಣೆಯಾಯಿತು. ಆಗ ಏಳು ಹೆಡೆ ಸರ್ಪ ತನ್ನ ಏಳು ಹೆಡೆಗಳನ್ನು ಎತ್ತಿ ಹುತ್ತದಿಂದ ಮೇಲಕ್ಕೆ ಬಂದಿತು. ಇದನ್ನು ಕಂಡ ಪಾಪನಾಯಕನಿಗೆ ಕೊಂಚ ಭಯವೆನಿಸಿತಾದರೂ ಅಂಜದೆ ನೋಡುತ್ತಾ ನಿಂತನು. ಧನ್ಯನಾದೆನು ಪಾಪಣ್ಣ ನಿನ್ನ ಸ್ಪರ್ಶದಿಂದ ನನಗೆ ಬಂದಿದ್ದ ಶಾಪ ಕಳೆಯಿತು. ಕಮರಿ ಕೊನರಾಗಿದ್ದ ಬಾಳಿಗೆ ಬೆಳಕನ್ನು ಕೊಟ್ಟೆ ಸತಿಪತಿಗಳನೊಂದಾಗಿ ಮಾಡಿದೆ. ಬಾಲಕ ನಿನ್ನ ಸಾಹಸಕ್ಕೆ ನಾವುಗಳು ಚಿರಋಣಿಯಾಗಿದ್ದೇವೆ. ಯಾವ ಮಂಗಾರಿ ಗಿಡದಿಂದ ಬಾಧೆ ಪಡುತ್ತಿದ್ದೆನೋ, ಅದೇ ಮಂಗಾರಿ ಗಿಡದಿಂದ ಬೆತ್ತ ಮಾಡಿಕೋ. ನಿನಗೆ ಎಂತಹ ತೊಂದರೆ ಬಂದರೂ ಸಹ ಆ ಬೆತ್ತವನ್ನು ಹಿಡಿದು ನನ್ನನ್ನು ಸ್ಮರಿಸು. ತಕ್ಷಣ ನಾನು ಪ್ರತ್ಯಕ್ಷವಾಗಿ ನಿನ್ನ ತೊಂದರೆ ನಿವಾರಿಸುತ್ತೇನೆ ಎಂದು ಹೇಳಿ ಪಾಪನಾಯಕನಿಗೆ ಜನ್ಮ ವೃತ್ತಾಂತವನ್ನು ತಿಳಿಸಿತು. ಆಗ ಪಾಪನಾಯಕನಿಗೆ ತನ್ನ ತಂದೆ ತಾಯಿಯರ ನೆನಪಾಯಿತು. ನೀನು ಮುಂದೆ ದೇವಮಾನವನಾಗು, ಸಕಲರಿಂದ ಪೂಜೆಗೊಳ್ಳುವವನಾಗುತ್ತೀಯ ನಾನು ವಾಸಿಸುತ್ತಿರುವ ಈ ಹುತ್ತದಲ್ಲಿ ಮಾಣಿಕ್ಯದ ಹರಳಿದೆ. ಇದನ್ನು ನಿನಗೆ ಧಾರೆಯೆರೆಯುತ್ತೇನೆ. ಇದನ್ನು ಸ್ವೀಕರಿಸು ಎಂದು ಕೊಟ್ಟಿತು. ನಾನು ನೆಲೆಸಿದ್ದ ಹುತ್ತ ನಿನ್ನ ಹೆಸರಿನಲ್ಲಿ ಯುಗಯುಗಾಂತರಗಳವರೆಗೆ ಇರುತ್ತದೆ. ಅಲ್ಲದೆ ಇದು ಪುಣ್ಯಕ್ಷೇತ್ರವಾಗಿ ನಿನ್ನ ಹೆಸರಿನಲ್ಲಿಯೇ ಪೂಜೆ ಸಾಂಗೋಪವಾಗಿ ನಡೆಯುತ್ತಾ, 'ಜಗಳೂರಜ್ಜನ ಪುಣ್ಯಕ್ಷೇತ್ರ' ಎಂದು ಪ್ರಸಿದ್ಧಿಯಾಗುತ್ತದೆ. ಮುಂದೆ ಇಲ್ಲಿಗೆ ಸಾವಿರಾರು ಭಕ್ತಾದಿಗಳು ಬಂದು ಪೂಜಿಸುತ್ತಾರೆ. ಇದೇ ಜಾಗದಲ್ಲಿ ಕುಳಿತು ದೇವರ ಧ್ಯಾನ ಮಾಡಿದರೆ ಮುಂದೆ ನೀನು ಮಹಾಪುರುಷನಾಗುವೆ. ನಿನ್ನಿಂದ ಲೋಕಕಲ್ಯಾಣವಾಗುತ್ತದೆ ಎಂದು ಸರ್ಪ ಆಶೀರ್ವದಿಸಿ ಸೋಮಲ ಬಂಡೆಯ ಕಡೆಗೆ ಧಾವಿಸಿತು. ಅಲ್ಲಿ ಅದು ಬೋರೆದೇವರ ಆಯಿತು. ಆ ಬೆತ್ತವೇ ಮುಂದೆ ನಾಗಮುರಿಬೆತ್ತ ಎಂದು ಪ್ರಸಿದ್ಧಿ ಪಡೆಯಿತು.

ಮಗು ಪಾಪನಾಯಕನು ಸರ್ಪರಾಜನಿಗೆ ಸಾಷ್ಟಾಂಗವೆರಗಿ ಸರ್ಪರಾಜನು ಕೊಟ್ಟ ಮಾಣಿಕ್ಯ ವನ್ನು ಲಂಗೋಟಿಯಲ್ಲಿ ಕಟ್ಟಿಕೊಂಡು ಕರುಗಳೊಂದಿಗೆ ಊರಕಡೆ ಹೊರಟನು. ಈ ರೀತಿ ಪಾಪನಾಯಕನು ಪ್ರತಿದಿನವೂ ದನಕರುಗಳನ್ನು ಹೊಡೆದುಕೊಂಡು ಹೋಗಿ ಕಾಡಿನಲ್ಲಿ ಅವುಗಳನ್ನು ಮೇಯಲು ಬಿಟ್ಟು ಸರ್ಪರಾಜನ ವಾಸಸ್ಥಳವಾದ ಹುತ್ತಕ್ಕೆ ಪ್ರದಕ್ಷಿಣೆ ಮಾಡಿ ಭಕ್ತಿಯಿಂದ ಪೂಜೆ ಸಲ್ಲಿಸುತ್ತಿದ್ದನು. ಹೀಗೆ ದಿನಗಳು ಉರುಳಿದವು. ಪಾಪನಾಯಕನನ್ನು ಸಾಕಿದ ಮುದಿಮಲ್ಲಜ್ಜಿ ದೈವಾಧೀನಳಾದಳು. ಇದರಿಂದ ಪಾಪನಾಯಕನಿಗೆ ಅತಿ ದುಃಖವಾಯಿತು. ಇಂದಿಗೂ ಸಹ ಚಳ್ಳಕೆರೆ ಪೂರ್ವದಿಕ್ಕಿನಲ್ಲಿ ಜಗಳೂರಜ್ಜನ ದೇವಸ್ಥಾನ ಎಂದು ಪ್ರಸಿದ್ಧಿ ಪಡೆದು ಹುತ್ತಕ್ಕೆ ಪೂಜೆ ನಡೆಯುತ್ತದೆ.

**ತಿರುಪತಿಗೆ ಪಯಣ**

ಒಂದು ಸಮುದಾಯದಲ್ಲಿ ಅದರ ಸಾಕ್ಷಿ ಪ್ರಜ್ಞೆಯೆಂತೆ ಕಾಣಿಸಿಕೊಳ್ಳುವ ಒಬ್ಬ ನಾಯಕನ ಹುಟ್ಟು ಆ ಸಮುದಾಯದ ಒಳಗೆ ಒಂದು ವೈಚಾರಿಕ ಆವರಣವನ್ನು ಸೃಷ್ಟಿಸು ತ್ತದೆ. ಆ ಮೂಲಕ ಅದು ಪ್ರಭುತ್ವವು ಹುಟ್ಟು ಹಾಕಿದ ಬೌದ್ಧಿಕ ಶೂನ್ಯತೆಯನ್ನು ಸ್ಫೋಟಿಸಲು ಯತ್ನಿಸುತ್ತದೆ. ಈ ವೈಚಾರಿಕ ಆವರಣವನ್ನು ಸೃಷ್ಟಿಸುವ ನಾಯಕ ಆ ಸಮುದಾಯದ ಆಶೋತ್ತರಗಳ ಪ್ರತಿರೂಪ. ಅವನು ಇಡಿಯಾಗಿ ಆಯಾ ಸಮುದಾಯಗಳ ಕನಸುಗಳು ಜಗತ್ತಿನ ಅಧಿಪತಿ. ಅವನು ಅಸಹಾಯಕ ಜೀವಿಗಳ ಒಟ್ಟು ಪ್ರತಿರೋಧದ ಅಸಾಮಾನ್ಯ ವ್ಯಕ್ತಿತ್ವ, ಅದಕ್ಕಾಗಿಯೇ ಆಧೀನಗೊಂಡ ಎಲ್ಲಾ ಸಮುದಾಯಗಳ ಅಂತಃ ಸ್ವತ್ತುಗಳ ಪ್ರತಿರೂಪದಂತೆ ಈ ನಾಯಕರು ಗೋಚರಿಸುತ್ತಾರೆ. ತಮ್ಮ ಪರಂಪರೆಯಲ್ಲಿ ಎಲ್ಲ ಬಗೆಯ ಸ್ಥಾವರ ಸಂಸ್ಥೆಗಳಿಗೆ ಪ್ರತಿದ್ವಂದ್ವಿಯಾಗಿ ನಿಲ್ಲಬಲ್ಲ ಅನುಭಪೀ ನಾಯಕರಿವರು.

ಪಾಪನಾಯಕ ತನ್ನನ್ನು ಸಾಕಿ ಸಲುಹಿದ ಮಲ್ಲಜ್ಜಿ ತೀರಿಕೊಂಡ ಪ್ರಯುಕ್ತ ಆಕೆಯ ಆತ್ಮಕ್ಕೆ ಶಾಂತಿ ಸಿಗಲೆಂದು ತಿರುಪತಿ ವೆಂಕಟೇಶ್ವರನ ದರ್ಶನವನ್ನು ಪಡೆಯಬೇಕೆಂದು ತೀರ್ಮಾನಿಸಿದನು. ತನ್ನ ಪ್ರಯಾಣದ ಖರ್ಚಿಗೆ ಹಣ ಬೇಕಾಗುತ್ತದೆ ಎಂದು ಯೋಚಿಸಿ ಹೇಗೋ ನಾನು ಇಷ್ಟುದಿನ ಊರ ಜನರ ದನಕರುಗಳನ್ನು ಕಾಯ್ದಿದ್ದೇನೆ. ಅವರನ್ನು ಕೇಳಿದರೆ ಖರ್ಚಿಗೆ ಬೇಕಾದ ದುಗ್ಗಾಣಿಯನ್ನು ಕೊಡಬಹುದು ಎಂದು ಹೇಳಿ ಊರಿನ ಗೌಡನನ್ನು ಕೇಳಿದನು. ಆಗ ಗೌಡನು 'ನಿನಗೆ ಯಾವ ತಿರುಪತಿ ದೇವರು ಹೋಗಯ್ಯ ಸುಮ್ಮನೆ ದನಗಳನ್ನು ಕಾಯ್ದುಕೊಂಡು ಇರು' ಎಂದು ಬೈಯ್ದು ಕಳುಹಿಸಿದನು. ಮಾರನೆಯ ದಿನ ಊರ ಗೌಡರಿಗೆ ಬುದ್ಧಿಕಲಿಸಲು ಮೇವಿಗಾಗಿ ಹೊಡೆದುಕೊಂಡು ಬಂದ ಊರ ದನಗಳ ಸುತ್ತ ನಾಗಮುರಿ ಬೆತ್ತದಿಂದ ಗೆರೆ ಹಾಕಿದ. ಬೆತ್ತವನ್ನು ಹಿಡಿದು ಸರ್ಪರಾಜನನ್ನು ನೆನೆದ. ದನಗಳ ಸುತ್ತ ಸರ್ಪಗಳ ಬೇಲಿಯಾಯಿತು. ಪಾಪನಾಯಕನು ದುರ್ಗಮ್ಮನ ಕೆರೆಯ ಮೇಲೆ ಧ್ಯಾನಾಸಕ್ತನಾಗಿ ಕುಳಿತು, ಸೂರ್ಯ ತನ್ನ ದಿನಚರಿಯಂತೆ ಮುಳುಗುತ್ತಿದ್ದಂತೆ ಕತ್ತಲೆಯಾಯಿತು. ಊರಜನ ತಮ್ಮ ದನಗಳು ಬಾರದೆ ಇದ್ದುದರಿಂದ ಪಂಜನ್ನು ಹಿಡಿದು ಪಾಪನಾಯಕನನ್ನು ಮತ್ತು ದನಕರುಗಳನ್ನು ಹುಡುಕುತ್ತಾ ಬಂದರು. ದನಕರುಗಳ ಸುತ್ತ ಬಾರಿ ಸರ್ಪಗಳ ಬೇಲಿ ಕಂಡ ಜನ ಭಯಭೀತರಾದರು, ಪಾಪನಾಯಕ ದುರ್ಗಮ್ಮನ ಕೆರೆಯ ಮೇಲೆ ಧ್ಯಾನಾಸಕ್ತನಾಗಿ ಕೂತಿದ್ದನ್ನು ಕಂಡರು. ತಾವು ದನಗಳನ್ನು ಹೊಡೆದುಕೊಂಡು ಹೋಗಲು ಮುಂದಾದರು. ಹಾವುಗಳು ಹೆಡೆಯೆನ್ನೆತ್ತಿಕೊಂಡು ಬಂದವು. ಊರ ಜನ ಹೆದರಿ ಓಡಿ ಬಂದು ಈ ಸಮಾಚಾರವನ್ನು ಗೌಡನಿಗೂ ಮತ್ತು ಊರ ಪ್ರಮುಖರಿಗೂ ತಿಳಿಸಿದಾಗ ಬಂದು ನೋಡಿದರು. ಗೌಡನು ಹಿಂದೆ ಮಲ್ಲಜ್ಜಿಯಿಂದ ಇವನ ಕಥೆಯನ್ನು ಕೇಳಿದ್ದರು. ಅದನ್ನು ನೆನಪಿಸಿಕೊಂಡು ' ಓಹೋ ಇವನು ಸಾಮಾನ್ಯ ಮನುಷ್ಯನಲ್ಲ,

ಮಹಾಪುರುಷನಿವನು' ಎಂದು ಇವನಿಗೆ ಕೊಡಬೇಕಾದ ದುಗ್ಗಾಣಿಯನ್ನೆಲ್ಲಾ ಕೊಡಿಸಿಬಿಟ್ಟನು. 'ಅಪ್ಪಾ ನೀನು ಮಹಾನುಭಾವ ನೀನು ಹೇಳಿದಂತೆ ನಾವು ಕೇಳಿಕೊಂಡು ಇರುತ್ತೇವೆ. ನೀನು ಇಲ್ಲಿಯೇ ಇದ್ದು ನಮಗೆಲ್ಲ ಬುದ್ಧಿ ಹೇಳು' ಎಂದು ಕೇಳಿಕೊಳ್ಳಲು, ಪಾಪನಾಯಕನು ಮೊದಲು ತಿಮ್ಮಪ್ಪನ ದರ್ಶನ ಮಾಡಿಕೊಂಡು ಬಂದು ತಮ್ಮ ಬಳಿ ಇರುತ್ತೇನೆ ಎಂದು ಸೋಮಲ ಬಂಡೆಗೆ ಬಂದನು. 'ಅಲ್ಲಿ ಅವರು ಕೊಟ್ಟ ದುಗ್ಗಾಣಿಗಳನ್ನೆಲ್ಲಾ ಆಕಾಶಕ್ಕೆ ತೂರಿದನು.' ದುಗ್ಗಾಣಿಗಳೆಲ್ಲಾ ಬಂಡೆಯಿಂದ ಸಿಡಿದು ಮೂರು ದುಗ್ಗಾಣಿಗಳು ಮಾತ್ರ ಬಂಡೆಯ ಮೇಲೆ ನಿಂತುಕೊಂಡವು.

ಪಾಪನಾಯಕ ಈ ಮೂರು ದುಗ್ಗಾಣಿಗಳನ್ನು ತನ್ನ ಲಂಗೋಟಿಯಲ್ಲಿ ಕಟ್ಟಿಕೊಂಡು, ಒಂದು ಮಂಗಾರು ಕಾಯಿಯನ್ನು ಕಿತ್ತು ಅದರ ಒಳಗಿನ ತಿರುಳನ್ನು ತೆಗೆದು ಒಂದು ಬುರುಡೆಯಂತೆ ಮಾಡಿಕೊಂಡು ಸೊಂಟಕ್ಕೆ ಕಟ್ಟಿಕೊಂಡನು. ನಂತರ ಊರಿನೊಳಕ್ಕೆ ಹೋಗಿ ಒಂದು ದುಗ್ಗಾಣಿಯನ್ನು ಕೊಟ್ಟು ಮಂಗಾರ ಕಾಯಿಯ ಬುರುಡೆಯಲ್ಲಿ ಎಣ್ಣೆ ತುಂಬಿಸಿಕೊಂಡನು. ಮತ್ತೊಂದು ದುಗ್ಗಾಣಿಗೆ ಅಕ್ಕಿಯನ್ನು ಕೊಂಡು ಒಂದು ತುಂಡು ಬಟ್ಟೆಯಲ್ಲಿ ಸೊಂಟಕ್ಕೆ ಕಟ್ಟಿಕೊಂಡನು. ಉಳಿದ ದುಡ್ಡನ್ನು ಭದ್ರವಾಗಿಟ್ಟುಕೊಂಡು ತಿರುಪತಿ ಕಡೆಗೆ ಪ್ರಯಾಣಿಸಿದನು. ಪಾಪನಾಯಕ ನಡೆಯುತ್ತ ಮಾರ್ಗ ಮಧ್ಯದಲ್ಲಿ ವಿಶ್ರಾಂತಿಗಾಗಿ ಒಂದು ಮರದಡಿಯಲ್ಲಿ ಕೂತಿದ್ದನು. ಅದೇ ಮಾರ್ಗದಲ್ಲಿ ಏಳು ಜನ ಕೊಂಡಲವಾಡ ವೆಂಕಟರಮನ ಗೋವಿಂದ ಎಂದು ಕೂಗುತ್ತಾ,

ಎದ್ದು ನೆನೆದೇನು, ಬಿದ್ದು ನೆನೆದೇನು ಮುದ್ದ ಮೂಡಲಗಿರಿಯ ಮುದ್ರೆ ನಾಮದ ಒಡೆಯ ಗೋವಿಂದನಾ, ಹತ್ತಲಾರೆ ಗಿರಿಯ ಸುತ್ತಲಾರೆ ಮಲೆಯ ಅತ್ತಿ ಬರಲಾರೆ ನಿನ್ನ ಗಿರಿಯಾ. ಎಂದು ಕೇಕೆ ಹಾಕುತ್ತಾ ಹಾಡುತ್ತಾ 'ಗೊಂದಲ್ಲಿ ಗೊಲ್ಲರು' ತಿರುಪತಿಗೆ ಹೋಗಲು ಹಾಲು ಮೊಸರಿನ ಮೀಸಲನ್ನು ಕೊಡವನ್ನು ಹೊತ್ತು ಯಾತ್ರೆ ಹೊರಟ್ಟಿದ್ದರು. ಅವರಿಗೂ ನಡೆದು ಸಾಕಾಗಿತ್ತು. ಮರದ ಕೆಳಗೆ ವಿಶ್ರಾಂತಿಗಾಗಿ ಕುಳಿತಿದ್ದ ಪಾಪನಾಯಕನ್ನು ಕಂಡು ಅಪ್ಪ ನಮಗೆ ಬಾಯಾರಿಕೆಯಾಗಿದೆ ಕುಡಿಯಲು ನೀರೆಲ್ಲಿದೆ ಹೇಳು ಎಂದು ಕೇಳಿದರು. ಪಾಪನಾಯಕನು ನೀರೆಲ್ಲಿದೆ ಎಂದು ಗೊತ್ತಿಲ್ಲದಿದ್ದರೂ ಸುಮ್ಮನೆ ಆ ಕಡೆ ಹೋಗಿ ಬನ್ನಿ ಎಂದು ಕೈ ತೋರಿಸಿದ. ಗೊಲ್ಲರು ಸ್ವಲ್ಪ ಈ ಮೀಸಲು ಹಾಲು ಸ್ವಲ್ಪ ಮೊಸರು ನೋಡಿಕೋ ಎಂದು ಹೇಳಿ ನೀರು ಹುಡುಕಿಕೊಂಡು ಹೊರಟರು. ಪಾಪಯ್ಯನಿಗೆ ತುಂಬಾ ಹಸಿವಾದ್ದರಿಂದ ಕಟ್ಟಿದ ಮೀಸಲು ಕೊಡದ ಬಾಯಿಗಳನ್ನು ಬಟ್ಟೆಗಳಿಂದ ಬಿಗಿಯಾಗಿ ಕಟ್ಟಿದ ಬಟ್ಟೆ ಬಿಚ್ಚಿ ನೋಡಲು ಕೊಡದಲ್ಲಿನ ಹಾಲು ಕೆನೆಕಟ್ಟಿತ್ತು. ಹಸಿದ ಹೊಟ್ಟೆ ದೇವರಿಗೆ ಸಮಾನ ಎಂದು ಎಲ್ಲಾ ಕೊಡಗಳ ಬಟ್ಟೆಯನ್ನು ಬಿಚ್ಚಿ ಕೆನೆಯನ್ನು ತಿಂದು, ಕುಡಿದು ಕೂತಿದ್ದನು. ಗೊಲ್ಲರಿಗೆ ನೀರು ಸಿಗದಿದ್ದು ಒಂದು, ಇವನು ಮೀಸಲನ್ನು ಎಂಜಲು ಮಾಡಿದ್ದು ಇನ್ನೊಂದು. ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು. ಅತ್ಯಂತ ಹೀನವಾಗಿ ಅವನನ್ನು ಬೈದು ಅವನ ಮೇಲೆ ಕಲ್ಲಿನ ಮಳೆಯನ್ನೇ

ಸುರಿಸಿದರು. ದೇವರ ಮೀಸಲನ್ನು ಎಂಜಲು ಮಾಡಿದ ಎಂಬುದೇ ಗೊಲ್ಲರ ಸಿಟ್ಟಿಗೆ ಕಾರಣವಾಗಿತ್ತು. ಪಾಪಯ್ಯನು ತಿಮ್ಮಪ್ಪನನ್ನು ಧ್ಯಾನಿಸಿದ. ಮೈ ಕೈ ನೋವು ವಾಸಿಯಾಯಿತು. ಪಾಪನಾಯಕನು ಪುನಃ ಎದ್ದು ತಿರುಪತಿಯ ದಾರಿ ಹಿಡಿದನು. ಗೊಲ್ಲರು ಮುಂದೆ ನಡೆಯುತ್ತಾ ಹೋದರೆ ಪಾಪನು ನಾಗಮುರಿ ಬೆತ್ತ ಸಮೇತನಾಗಿ

ಎದ್ದು ನೆನೆದೇನು ಬಿದ್ದು ನೆನೆದೇನು
ಮುದ್ದು ಮೂಡಲ ಗಿರಿಯ
ಮುದ್ರೆ ನಾಮದ ಒಡೆಯ ಗೋವಿಂದಾನ

ಎಂದು ಹಾಡುತ್ತ ಗೊಲ್ಲರು ಗುಂಪಿನ ಮುಂದೆ ಪ್ರತ್ಯೇಕ್ಷನಾದನು, ಆಗ ಅವರು ಇವನನ್ನು ಗುರುತಿಸಿದರು. ನಾವೆಲ್ಲಾ ಸೇರಿ ಕಲ್ಲುಗಳಿಂದ ಹೊಡೆದು ಮಲಗಿಸಿದ್ದ ಪಾಪಯ್ಯನನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯವುಂಟಾಯಿತು. ಅವರೆಲ್ಲಾ ಭಯಬೀತರಾಗಿ ತಾವು ಮಾಡಿದ ತಪ್ಪಿಗೆ ಕ್ಷಮೆ ಬೇಡಿ ಅವನ ಕಾಲಿಗೆ ಎರಗಿದರು. ಅವರನ್ನು ಕ್ಷಮಿಸಿ ನೀವು ದೊಡ್ಡ ತಪ್ಪನ್ನೇನೂ ಮಾಡಿಲ್ಲ ಬನ್ನಿ ಎಂದು ಕರೆದುಕೊಂಡು ಅವನ ಮುಂದಾಳತ್ವದಿಂದ ತಿರುಪತಿಯ ತಿಮ್ಮಪ್ಪನ ಕಡೆಗೆ ಪ್ರಯಾಣ ಬೆಳೆಸಿದರು.

**ಪಾಪನಾಯಕ ತಿಮ್ಮಪ್ಪನ ದರ್ಶನ ಪಡೆದದ್ದು**

ಪಾಪನಾಯಕನು ತಿರುಪತಿಯನ್ನು ತಲುಪಿದ ತಕ್ಷಣ ಪ್ರಯಾಣದ ಮಾರ್ಗ ಮಧ್ಯದಲ್ಲಿ ತನ್ನ ಮಂಗಾರಿಕಾಯಿಯಲ್ಲಿ ಸ್ವಲ್ಪ ದವಸ, ಸ್ವಲ್ಪ ತುಪ್ಪವನ್ನು ತೆಗೆದುಕೊಂಡ ಹೋಗಿದ್ದ. ಆ ದಿವಸದಿಂದ ಅನ್ನವನ್ನು ಮಾಡಿ ಓಂ ನಮೋ ತಿರುಮಲ ನಮೋ ಎನ್ನುತ್ತಾ ಸಾವಿರಾರು ಜನರಿಗೆ ಊಟ ಬಡಿಸಿದನು. ಇವನು ಸಾಮಾನ್ಯನಲ್ಲ ಎಂದು ಸಂತೃಪ್ತರಾದ ಜನ ಇವನ ಕಾಲಿಗೆ ಎರಗಿದರು. ಅನ್ನ ಪ್ರಸಾದ ನೀಡಿದ ಪಾಪಯ್ಯ ತಿಮ್ಮಪ್ಪನ ದರ್ಶನ ಮಾಡಲು ಹೋದಾಗ ಹೊತ್ತು ಮೀರಿತ್ತು. ದೇವಸ್ಥಾನದ ಬಾಗಿಲುಗಳು ಮುಚ್ಚಿದ್ದವು. ಓರ್ವ ವೃದ್ಧ ಹಸಿವಿನಿಂದ ಬಂದು ಪಾಪಯ್ಯನ ಬಳಿ ಏನಾದರೂ ತಿನ್ನಲು ಕೊಡಲು ಕೇಳಿದಾಗ ಪಾಪನಾಯಕನು ಪಾತ್ರೆಯಲ್ಲಿದ್ದ ಅನ್ನವನ್ನು ಬಡಿಸಿದ. ಆ ವೃದ್ಧನು ಸಂತೃಪ್ತಿಯಾಗಿ ಊಟ ಮಾಡಿದ. ಕೊನೆಗೆ ತಿಮ್ಮಪ್ಪನ ದರ್ಶನವಾಗಲಿಲ್ಲ ಎಂಬ ಕೊರಗು ಅವನಲ್ಲಿ ಉಳಿಯಿತು. ಆಗ ಪಾಪನಾಯಕನಿಗೆ ಕೋಪವೇರಿ ಅಲ್ಲೇ ತೆಂಗಿನಕಾಯಿ ಹೊಡೆಯಲು ಇಟ್ಟಿದ್ದ ಗುಂಡುಕಲ್ಲನ್ನು ಎತ್ತಿ ದೇವರ ಪ್ರತಿಮೆಗೆ ಎಸೆದನು. ಸ್ವಲ್ಪ ವಾಲಿದ ತಿಮ್ಮಪ್ಪ ಕಲ್ಲಿನಿಂದ ತಪ್ಪಿಸಿಕೊಂಡು ಆ ಕ್ಷಣವೇ ದೇವಸ್ಥಾನದ ಗಂಟೆಗಳು ಮೊಳಗಿದವು. ಪಾಪನಾಯಕನಿಗೆ ಆ ರಾತ್ರಿಯಲ್ಲಿ ತಿಮ್ಮಪ್ಪನ ಘಂಟನಾದ ಕೇಳಿ ಆಶ್ಚರ್ಯ ಹಾಗೂ ಸಂತೋಷವಾಯಿತು. ಏಳು ಕೊಂಡಲವಾಡ ತಿರುಪತಿ ತಿಮ್ಮಪ್ಪ ಎನ್ನುತ್ತಾ ದೇವಸ್ಥಾನದ ಕಡೆ ಧಾವಿಸಿದ. ತಾನು ತಂದಿದ್ದ ದುಗ್ಗಾಣಿಯಲ್ಲಿ ಒಂದನ್ನು

ಕಣಜಕ್ಕೆ ಹಾಕಿದ ಇಡೀ ಕಣಜ ದುಗ್ಗಾಣಿ ಯಿಂದ ತುಂಬಿತು. ನಡುರಾತ್ರಿಯಲ್ಲಿ ಹಸಿದು ಬಂದವನು ತಿಮ್ಮಪ್ಪನೇ ಎಂದು ತಿಳಿಯಿತು.

ಅಶರೀರವಾಣಿಯ ಮೂಲಕ ತಿಮ್ಮಪ್ಪ ಈ ರೀತಿ ಮಾತನಾಡಿದ 'ಪಾಪನಾಯಕ ಸಿಟ್ಟಿನಿಂದ ದುಡುಕಬೇಡ, ಸಿಟ್ಟು ಒಳ್ಳೆಯದಲ್ಲಾ. ನಿನ್ನ ಎದುರಿಗೆ ನಿಲ್ಲಲು ಯಾರು ಸಮರ್ಥರಿಲ್ಲ. ನೀನು ಪರಮೇಶ್ವರನ ಅವತಾರ . ಕೋಪ ಬಿಟ್ಟು ನೀನಗೇನು ಬೇಕು ಕೇಳು' ಪಾಪಯ್ಯನು ಎತ್ತಿದ ಕಲ್ಲನ್ನು ಬಿಸಾಡಿದನು. ಅದು ಪಾಪನಾಶದ ಬಳಿ ಬಿದ್ದಿತು. ಪಾಪನಾಯಕ ಸ್ವಾಮಿ ನನ್ನ ಕೋಪವೇ ನನ್ನ ಸಾವಿಗೆ ಮೂಲವಾದರೂ ಚಿಂತೆಯಿಲ್ಲ. ನಿನ್ನ ಎದುರಿಗೆ ಮುಕ್ತಿ ಪಡೆಯಲು ಪ್ರಯತ್ನಿಸಿದೆ. ನಿನ್ನ ದರ್ಶನದಿಂದ ನಾನು ಪಾವನನಾದೆ. ನನಗೇನು ಬೇಡ ಎಂದನು. ತಿಮ್ಮಪ್ಪನು ಪಾಪನಾಯಕ ಅಜ್ಞಾನಿಗಳ ಪಾಪನಾಶವಾಗಿ, ಪಾಪನಾಶಮಾಡುವ ಪಾವನ ಪುರುಷ ಪಾಪನಾಯಕನೆಂದು ಪ್ರಸಿದ್ಧಿ ಪಡೆ. ನಿನ್ನಿಂದ ಇನ್ನೂ ಲೋಕ ಕಲ್ಯಾಣದ ಕಾರ್ಯವಾಗಬೇಕು. ಪ್ರಪಂಚದಲ್ಲಿ ತುಂಬಿ ತುಳುಕುತ್ತಿರುವ ಜಾತಿ,ಕುಲ, ಮೂಡನಂಬಿಕೆಗಳನ್ನು ಹೋಗಲಾಡಿಸಿ ಧರ್ಮರಕ್ಷಕನಾಗು. ಮಾನವ ಜನಾಂಗಕ್ಕೆ ಭಕ್ತಿಯನ್ನು ಬೋಧಿಸುವವನಾಗು. ನಿನ್ನ ವಯಸ್ಸು ಮುಗಿಯುವಾಗ ನಾನೇ ನಿನಗೆ ಮೋಕ್ಷವನ್ನು ಕರುಣಿಸುತ್ತೇನೆ. ಎಂದು ಆಶೀರ್ವದಿಸಿದನು. ಮತ್ತು ಪಾಪನಾಯಕ ಜನ್ಮ ಇರುವವರೆಗೆ ಅವನ ಆತ್ಮರಕ್ಷಣೆಗಾಗಿ ಮೂರು ವರಗಳನ್ನು ಕರುಣಿಸಿದನು.

**ಮುಕ್ಕಣ್ಣನ ಕಠಾರಿ** (ಮುಕ್ಕಣ್ಣನ ಅಲುಗು)

ಇದು ತನ್ನ ದೊಡ್ಡಪ್ಪನಾದ ಸೂರ್ಯಯರಗಟ್ಟನಾಯಕನ ಬಳಿ ಇದೆ.

**ಸೂರ್ಯ ನಂದನ ಕಠಾರಿ** : ಇದು ನಿನ್ನ ತಂದೆಯಾದ ಕೋರ್ಲ ಮಲ್ಲಿನಾಯಕನ ಬಳಿ ಇದೆ.

**ಸಿಡಿಲು ಮಿಂಚಿನ ಕಠಾರಿ** : ಇದು ಜಗಳೂರು ಜಗಪತಿರಾಯನ ಆಸ್ಥಾನ ಸೇರಿದೆ. ಈ ಮೂರು ಕತ್ತಿಗಳನ್ನು ವಶಪಡಿಸಿಕೊಂಡು, ನಿರ್ಭಯವಾಗಿ ಲೋಕ ಸಂಚಾರ ಮಾಡುತ್ತ, ಧರ್ಮದ ಸಂದೇಶವನ್ನು ಸಾರು, ನೀನು ನನ್ನ ಭಕ್ತ ಶ್ರೇಷ್ಠರಲ್ಲಿ ಪ್ರಖ್ಯಾತನಾಗು. ಈ ಮೂರು ಕಠಾರಿಗಳನ್ನು ಮೂರು ಸ್ಥಳಗಳಲ್ಲಿ ಸ್ಥಾಪಿಸಿ ಆ ಕ್ಷೇತ್ರಗಳು ಮುಂದೆ ಪುಣ್ಯ ಕ್ಷೇತ್ರಗಳಾಗುತ್ತವೆ. ಮತ್ತೇನು ಬೇಕು ಬೇಡ ಎಂದಾಗ ನನ್ನ ಬುಡಕಟ್ಟಿನವರಿಗೆ ಕೆಲವು ವರವನ್ನು ದಯಪಾಲಿಸಿ ಎಂದು ಬೇಡಿಕೊಂಡ.

ಮೂರು ಗಾರರು ಮುತ್ತಯ್ಯಗಳು ದೇವರ ಎತ್ತುಗಳು. // ಮುತ್ತು //

ನನ್ನಿವಾಳದ ಮುತ್ತಿಗಾರ

ಮುತ್ತಿಗಾರ

ಪದಿ ಮುತ್ತಿಗಾರ ಎಂದು ವಿಭಾಗಿಸಿದೆ.

ಮೂರು ಜನ ಪೂಜಾರಿಗಳು

೧ ಕಾಮಗೇತಿ

೨ ನೆಲಗೇತಿ

೩ ಬುಲ್ಲಡ್ಲು

ಮೂರು ಜನ ದಾಸಯ್ಯಗಳು

೧ ಮುಂಡಾಸದಾಸರು

೨ ಗಡುಗುದಾಸರು

೩ ದಡ್ಡಿ ದಾಸರು

ಏಳು ಜನ ಬಂಟರು

ಚಕ್ರಮುದ್ರೆ, ಸಾಲಿ ಗ್ರಾಮಗಳು ಚಂದ್ರಾವಾದ್ಯ ಇವುಗಳನ್ನು ಪಡೆದುಕೊಂಡು ತನ್ನ ಸ್ವಸ್ಥಾನಕ್ಕೆ ಮರಳಿದನು. ಪಾಪನಾಯಕ ತಿರುಪತಿ ತಿಮ್ಮಪ್ಪನ ದರ್ಶನ ಮುಗಿಸಿಕೊಂಡು ಬರುವ ವೇಳೆಗೆ ಓರೆಗಲ್ಲು ಪಟ್ಟಣದ ಜನರು ದುರ್ಗಿ ಎಂಬ ರಾಕ್ಷಸಿಯ ಹಾವಳಿಯಿಂದ ಭಯಭೀತರಾಗಿದ್ದರು. ಪಾಪನಾಯಕನ ದಾರಿಯನ್ನೇ ಕಾಯುತ್ತಿದ್ದರು. ದುರ್ಗಿಯಿಂದ ತಮ್ಮನ್ನು ರಕ್ಷಿಸಬೇಕೆಂದು ಪಾಪನಾಯಕನ ಮೊರೆಹೊಕ್ಕರು. ಸೂರ್ಯನಂದನ ಕಠಾರಿ ತನ್ನ ತಂದೆ–ತಾಯಿಗಳಾದ ಕೋರ್ಲಮಲ್ಲನಾಯಕ ಮತ್ತು ಬಾಳಾರ ಪಟ್ಟಮ್ಮ, ತಮ್ಮ ಮಾವ ಕ್ಯಾಸಯ್ಯನ ಮನೆ ಆಳಾಗಿ ದುಡಿಯುತ್ತಿದ್ದರೂ ಕ್ಯಾಸಯ್ಯ ಇವರಿಗೆ ಬಾರಿ ಹಿಂಸೆಯನ್ನು ಕೊಡುತ್ತಿದ್ದ. ಅಲ್ಲದೇ ಕೋರ್ಲಮಲ್ಲನಾಯಕನ ದನಕರುಗಳನ್ನು ವಶಪಡಿಸಿ ಕೊಂಡಿದ್ದನು.

ಈ ವಿಚಾರಗಳನ್ನು ತಿಳಿದ ಪಾಪನಾಯಕ ಕ್ಯಾಸಯ್ಯನ ಆಸ್ಥಾನಕ್ಕೆ ಹೋದನು. ಅಲ್ಲಿ ಈ ಬಾಲಕನನ್ನು ನೀನು ಇಲ್ಲಿಗೆ ಏಕೆ ಬಂದೆ? ನೀನು ಯಾರು? ಎಂದು ವಿಚಾರಿಸಿದನು. ನಾನು ಕ್ಯಾಸಯ್ಯನ ಅಳಿಯ ಕೋರ್ಲಮಲ್ಲನಾಯಕನ ಮಗ ಎಂದು ಹೇಳಿದಾಕ್ಷಣ ಆಳುಗಳು ಕ್ಯಾಸಯ್ಯನ ಮುಂದೆ ಎಳೆದುಕೊಂಡು ಹೋಗಿ ನಿಲ್ಲಿಸಿದರು. ಇವನ ಕೈಗಳು ಅವರಿಗೆ ಹಾವಾಗಿ ಕಂಡಿತು. ಇದನ್ನು ಕಂಡ ಆಳುಗಳು ಅಲ್ಲಿಂದ ಪಲಾಯನ ಮಾಡಿದರು. ನಿರ್ಭಯವಾಗಿ ಕ್ಯಾಸಯ್ಯನ ಮನೆಯನ್ನು ಹೊಕ್ಕರು. ಕ್ಯಾಸಯ್ಯ ಪಾಪನಾಯಕನನ್ನು ಕುರಿತು ಯಾರು ನೀನು? ಯಾರ ಹೆದರಿಕೆ ಇಲ್ಲದೇ ಇಲ್ಲಿಗೆ ಹೇಗೆ ಬಂದೆ? ಎಂದು ಪ್ರಶ್ನಿಸಲು, ಆಗ ವಿನಯದಿಂದ ನಾನು ನಿನ್ನ ಅಳಿಯ, ಅಂದರೆ ಕೋರ್ಲಮಲ್ಲನಾಯಕನ ಮಗ. ನನ್ನ ತಂದೆ ತಾಯಿಗಳು ಎಲ್ಲಿದ್ದಾರೆ. ಅವರನ್ನು ನೋಡಬೇಕು.

ಎಂದಾಕ್ಷಣ ಕ್ಯಾಸಯ್ಯನ ಪಿತ್ತ ನೆತ್ತಿಗೇರಿತು. 'ಇಲ್ಲಿ ಯಾರು ಇಲ್ಲ, ಇಲ್ಲಿಂದ ಹೊರಟುಹೋಗು'. ಎಂದು ದರ್ಪದಿಂದ ಕ್ಯಾಸಯ್ಯ ಆಜ್ಞಾಪಿಸಿದಾಗ ಪಾಪನಾಯಕ ಹುಣಸೆ ಬರಲಿನಿಂದ ಕ್ಯಾಸಯ್ಯನನ್ನು ಕಂಬಕ್ಕೆ ಕಟ್ಟಿ ಹೊಡೆದನು. ಆಗ ಕ್ಯಾಸಯ್ಯ ಬಾಯಿ ಬಿಟ್ಟು 'ನಿನ್ನ ತಂದೆ ತಾಯಿಗಳು ಏಳು ಅಂತಸ್ತಿನ ಮಾಳಿಗೆಯಲ್ಲಿದ್ದಾರೆ' ಪಾಪಯ್ಯ ಕ್ಯಾಸಯ್ಯನ ಜೊತೆಗೂಡಿ ತನ್ನ ತಂದೆ ತಾಯಿಯರ ಹತ್ತಿರ ಹೋದರು. ಕೋರ್ಲಮಲ್ಲನಾಯಕ ಬಾಳಾರಪಟ್ಟಣ್ಣಮ್ಮ ಪಾಪನಾಯಕನನ್ನು ಕಂಡು ಆನಂದಭರಿತರಾದರು. ತಾವು ಮಾಡಿದ ಕೆಲಸಕ್ಕೆ ನಮಗೆ ಈ ಗತಿ ಬಂದಿದೆ. ಎಂದು ದುಃಖಿಸಿದರು. ಪಾಪನಾಯಕನು ಅವರನ್ನು ಸಮಾಧಾನ ಮಾಡಿ ನಾನು ಧನ್ಯನಾದೆ ಎಂದು ಅವರ ಕಾಲಿಗೆ ಎರಗಿದನು. ಪಾಪನಾಯಕನು ತನ್ನ ಜನ್ಮ ವೃತಾಂತವನ್ನು ಶಿವ ಪಾರ್ವತಿಯರ ಅಶೀರ್ವಾದ ನೀಡಿದ್ದು, ತಿರುಪತಿ ತಿಮ್ಮಪ್ಪನ ದರ್ಶನ ಮಾಡಿದ್ದು ಎಲ್ಲಾ ವಿಚಾರಗಳನ್ನು ತಿಳಿಸಿದಾಗ ಅವರಿಗೆ ತಮ್ಮ ಮಗನೆಂದು ಖಚಿತವಾಯಿತು. ತಂದೆ ತಾಯಿಗಳನ್ನು ತಬ್ಬಿಕೊಂಡು ಮುದ್ದಾಡಿದನು. ಅಯ್ಯಾ ಕಂದ ನಾವು ನಿನ್ನನ್ನು ಯಾವುದೋ ಭೂತವೆಂದು ತಿಳಿದು ಕಾಡಿನ ಪಾಲು ಮಾಡಿ ಬಂದಿದ್ದೇವು. ನಾವೆಂಥ ಕ್ರೂರಿಗಳು. ಆಗ ತಾನೇ ಜನಿಸಿದ ನಿನ್ನನ್ನು ಮಗನೆಂಬ ಮಮತೆ ಇಲ್ಲದೇ ಬಿಸಾಡಿ ಬಂದ ನಮ್ಮನ್ನು ಮನ್ನಿಸಪ್ಪ. ನೀನು ಸಾಮಾನ್ಯ ಮನುಷ್ಯನಲ್ಲ ದೈವಾಂಶ ಸಂಭೂತ. ಈ ಚಿಕ್ಕವಯಸ್ಸಿನಲ್ಲಿಯೇ ಶಿವ ಪಾರ್ವತಿಯರ ದರ್ಶನ ಪಡೆದುಕೊಂಡೆ. ಆದಿಶೇಷನ ದರ್ಶನ ಮಾಡಿ ಶೇಷಶಯನ ನಾರಾಯಣನ ದರ್ಶನವನ್ನೂ ಸಹ ಮಾಡಿ ಬಂದ ನೀನು ಸಾಕ್ಷಾತ್ ಪರಮಾತ್ಮನ ಅವತಾರವಾಗಿ ನಿನ್ನ ತಾಯಿಯ ಗರ್ಭದಿಂದ ಬರುವಾಗಲೇ ನೀನು ಪವಾಡವನ್ನು ತೋರಿಸಿದೆ. ಆದರೆ ಕಾಡು ಮನುಜರಾದ ನಮಗೆ ನಿನ್ನ ದೈವತ್ವವನ್ನು ಅರಿತುಕೊಳ್ಳಲು ಸಾಧ್ಯವಾಗಲಿಲ್ಲ. ಯಾವ ಜನ್ಮದ ಪುಣ್ಯದಿಂದಲೋ ನೀನು ನಮ್ಮ ಹೊಟ್ಟೆಯಲ್ಲಿ ಹುಟ್ಟಿಬಂದೆ. ನಿನ್ನ ಶಕ್ತಿಯನ್ನು ಅರಿತುಕೊಳ್ಳಲಾಗಲಿಲ್ಲ. ತಾವು ಮಾಡಿದ ಈ ತಪ್ಪನ್ನು ಕ್ಷಮಿಸು' ಎಂದು ಬೇಡಿಕೊಂಡರು. ಆ ವೇಳೆಗೆ ಕ್ಯಾಸಯ್ಯನು ತನ್ನ ದಂಡುದಳಗಳನ್ನು ಕರೆಸಿ, ಈ ಪೋರನನ್ನು ಕತ್ತು ಹಿಡಿದು ಹೊರನೂಕಿರಿ ಎಂದು ಆಜ್ಞೆ ಮಾಡಿದನು. ಆ ದಂಡುದಳದ ಕಣ್ಣಿಗೆ ಪಾಪನಾಯಕ ನಾಗರಹಾವಾಗಿ ಕಂಡನು. 'ಸ್ವಾಮಿ ಈ ಬಾಲಕ ಸಾಮಾನ್ಯ ಮಾನವನಲ್ಲ, ಇವನನ್ನು ಎದುರು ಹಾಕಿಕೊಳ್ಳಬೇಡಿ, ಇವನ ಇಚ್ಛೆಯಂತೆ ಇವನ ತಂದೆತಾಯಿಯನ್ನು ಬಿಡಿ. ಬೆಂಕಿಯ ಜೊತೆ ಸರಸವಾಡುವುದು ಒಳ್ಳೆಯದಲ್ಲ' ಎಂದು ಕ್ಯಾಸಯ್ಯನಿಗೆ ಬುದ್ಧಿವಾದ ಹೇಳಿದರು. ಆದರೂ ಕ್ಯಾಸಯ್ಯ ಒಪ್ಪಲಿಲ್ಲ. ಇಲ್ಲಿಯವರೆಗೆ ಸಾವಿರಾರು ಜನರನ್ನು ಧ್ವಂಸಮಾಡಿ ನನ್ನ ಜಯದ ಗುರುತಿಗಾಗಿ ಕಾಳಿಂಗರಾಯನ ಮಡುವಿನ ಬಳಿಯಿದ್ದ ಏಳು ರಣಗಂಬಗಳನ್ನು ನಡೆಸಿದ ನನ್ನಂತಹ ವೀರಪರಾಕ್ರಮಿಯ ಮುಂದೆ ನಿಂತು ನಿರ್ಭಯವಾಗಿ ಮಾತನಾಡುವ ಇವನು ಯಾವ ಲೆಕ್ಕದವನು. ನಾನು ಯಾರು? ನನ್ನ ಪರಾಕ್ರಮ ಎಂತಹುದ್ದು ಎಂಬುದು ಈ ಪೋರನಿಗೆ ಗೊತ್ತಿಲ್ಲ ಅಂತ ಕಾಣುತ್ತೆ ಎಂದು ಜಂಭ ಕೊಚ್ಚಿಕೊಂಡನು.

ದೈವಬಲವುಳ್ಳ ಪಾಪನಾಯಕನಿಗೆ ಕ್ಯಾಸಯ್ಯನ ಗೊಡ್ಡು ಬೆದರಿಕೆಗಳಿಂದ ಯಾವ ಭಯಭೀತಿಯೂ ಆಗಲಿಲ್ಲ. ಈ ಮಾತುಗಳನ್ನು ಕೇಳುತ್ತಾ ಗಹಗಹಿಸಿ ನಗುತ್ತಾ, 'ಮಾವನವರೇ ನಿಮ್ಮ ಪರಾಕ್ರಮಗಳನ್ನು ನೀವೇ ಹೇಳಿಕೊಳ್ಳುತ್ತಿರುವಿರಿ. ಈ ನಿಮ್ಮ ಬೆದರಿಕೆಗೆ ಬೆದರುವ ಗಂಡು ನಾನಲ್ಲ. ನಾನು ಹುಟ್ಟಿದ್ದು ವೀರ-ಬೇಡರ ವಂಶದಲ್ಲಿ, ಬೆಳೆದಿರುವುದು ದೈವದ ಆಶೀರ್ವಾದದ ನೆರಳಿನಲ್ಲಿ. ನಿನ್ನಂತಹ ಸಾವಿರ ಜನ ಘರ್ಜಿಸಿದರೂ ಸಹ ನಡುಗುವ ಗಂಡು ನಾನಲ್ಲ. ನಿನ್ನ ದಂಡುದಳ, ನಿನ್ನ ಜಯದ ರಣಗಂಬಗಳು ನನ್ನನ್ನು ಏನೂ ಮಾಡಲಾರವು. ನಿನ್ನ ಹೆದರಿಕೆಗೆ ಬೆದರಿ ಹಿಂದಿರುಗುವವನಲ್ಲ. ವೃಥಾ ಜಗಳ, ಕಾದಾಟ ಬೇಡ. ನನ್ನ ತಾಯಿ ತಂದೆಯರನ್ನು ಸೆರೆಮನೆಯಿಂದ ಬಿಡು. ಶೆಟ್ಟರನ್ನು ಜೀತದಿಂದ ಮುಕ್ತರನ್ನಾಗಿ ಮಾಡು. ನನ್ನ ಅತ್ತೆಯನ್ನು ನಿನ್ನ ಮನೆಯಲ್ಲಿ ಸೇರಿಸಿಕೋ' ಎಂದು ವಿನಯವಾಗಿ ಹೇಳಿದನು.

ಆ ವೇಳೆಗೆ ಊರಿನ ಜನರೆಲ್ಲ ಸೇರಿದ್ದರು. ಈ ಹುಡುಗನ ಮಾತನ್ನು ಕೇಳಿ ಬೆಕ್ಕಸಬೆರಗಾದರು. ನನ್ನ ಮರ್ಯಾದೆಯನ್ನು ಈ ಜನರ ಮಧ್ಯೆ ತೆಗೆಯುತ್ತಿದ್ದನಲ್ಲಿ ಕ್ಯಾಸಯ್ಯನಿಗೆ ಎಂದು ಸಿಟ್ಟು ಹೆಚ್ಚಾಯಿತು. ತಾಳ್ಮೆಮೀರಿತು ಕೂಡಲೇ ತನ್ನ ಆಜ್ಞೆ ಮಾಡಿ 'ಇವನನ್ನು ಕಡಿದು ತುಂಡು ಮಾಡಿ ಕಾಡಿನಲ್ಲಿ ಎಸೆದು ಬನ್ನಿ' ಎಂದು ಹೇಳಿದಾಗ ಪಾಪನಾಯಕನಿಗೂ ತಾಳ್ಮೆ ತಪ್ಪಿ, ಕೋಪವುಕ್ಕಿ ಇನ್ನೂ ನಾನು ಸುಮ್ಮನಿದ್ದಲ್ಲಿ ಉಪಯೋಗವಿಲ್ಲವೆಂದು ಯೋಚಿಸಿ, ಮನಸ್ಸಿನಲ್ಲಿ ಶಿವ ಪಾರ್ವತಿಯರನ್ನು, ಏಳೆಡೆ ಆದಿಶೇಷನನ್ನು, ನಾರಾಯಣನನ್ನು ಮನದಲ್ಲಿ ಧ್ಯಾನಿಸಿ ತಿಮ್ಮಪ್ಪನಿಂದ ಪಡೆದ ಮುಕ್ಕಾಡ ಅಲುಗಿನಿಂದ ಅವನ ಮೈಮೇಲೇರಿ ಬಂದ ದಂಡುದಳವೆಲ್ಲವನ್ನು ಧ್ವಂಸಮಾಡಿ ಅವನ ವಿಜಯದ ಏಳು ರಣಗಂಬಗಳನ್ನು ತನ್ನ ಸ್ವಾಧೀನಪಡಿಸಿಕೊಂಡನು. ಹುಡುಗನ ಪರಾಕ್ರಮವನ್ನು ಕಂಡು ಜನರು ಬೆಕ್ಕಸಬೆರಗಾದರು. ಕ್ಯಾಸಯ್ಯನ ಹೆಸರು ಕೇಳಿದರೆ ಸಾಕು ಜನ ಗಡಗಡನೆ ನಡುಗುತ್ತಿದ್ದರು. ಎದುರಿಗೆ ನಿಂತು ಮಾತನಾಡುವ ಎದೆಗಾರಿಕೆ ಯಾರಿಗೂ ಇರಲಿಲ್ಲ. ಅಂಥ ಗಂಡುಗಲಿಯನ್ನು ಕೇವಲ ಒಬ್ಬ ಬಾಲಕ ದಂಡುದಳಗಳ ಬಲವಿಲ್ಲದೆ ಏಕಾಂಗಿಯಾಗಿ ಹೆದರಿಸಿ ಹಿಮ್ಮೆಟ್ಟಿಸಿದರೆ ಇವನು ಸಾಮಾನ್ಯನಲ್ಲ ಇವನಾರೋ ದೈವ ಪುರುಷನಿರಬೇಕೆಂದು ಹುಡುಗನ ಪರಾಕ್ರಮವನ್ನು ಹೊಗಳಿದರು.

ಕ್ಯಾಸಯ್ಯನಿಗೆ ಕೇವಲ ಹುಡುಗನಿಗೆ ಸೋತು ಹೋದೆನಲ್ಲ ಎನ್ನುವುದಕ್ಕಿಂತ ಇವನಿಗೆಲ್ಲಿ ಬಂತು ಪರಾಕ್ರಮ, ಇವನೇನೊ ಜಾದುಗಾರನೋ,ವೀರನೋ, ಶೂರನೋ,ಒಂದೂ ತಿಳಿಯದಾ ಯಿತು. ಮಹಾನ್ ವೀರರೆಲ್ಲರೂ ನನ್ನಿಂದ ಸೋತುಹೋಗಿದ್ದಾರೆ. ನನ್ನ ಹೆಸರು ಕೇಳಿದವನ ಗುಂಡಿಗೆ ನಡುಗುತ್ತಿತ್ತು. ಅಂತಹ ಗಂಡುಗಲಿಯಾದ ನಾನು ನನ್ನ ದಂಡೆಲ್ಲವೂ ಇವನಿಂದ ಸೋತು ಹೋಯಿತೆಂದರೆ, ಇನ್ನೂ ನಾನು ಬದುಕಿದ್ದಲ್ಲಿ ಫಲವಿಲ್ಲ ಎಂದು ಚಿಂತಿಸುತ್ತ ಮೂಕನಾದನು. ಅಷ್ಟು ಸೋಲನ್ನು ಅನುಭವಿಸಿದರೂ ವನು ತನ್ನ ಹಠವನ್ನು ಬಿಡಲಿಲ್ಲ.

ಗ್ರಾಮದ ಹಿರಿಯರು ಈ ವ್ಯವಹಾರವನ್ನು ಹೀಗೆಯೇ ಬಿಟ್ಟಾರೆ ಪರಿಸ್ಥಿತಿ ವಿಕೋಪಕ್ಕೆ ಹೋಗಿ ಇನ್ನೂ ಏನೇನು ಅನಾಹುತಗಳು ಸಂಭವಿಸುತ್ತವೆಯೋ ಎಂದು ತಿಳಿದು ಒಂದು ತಿರ್ಮಾನಕ್ಕೆ ಬಂದು ಎಲ್ಲರು ಪಂಚಾಯ್ತಿಗೆ ಸೇರಿದರು. ಪಾಪನಾಯಕನನ್ನು ಕುರಿತು 'ಇವರೇ ನನ್ನ ತಾಯಿ ತಂದೆಯರು ಎನ್ನುವುದಕ್ಕೆ ಕುರುಹುಗಳೇನು ಎಂದು ಊರಿನ ಪಂಚಾಯ್ತಿದಾರರು ಪ್ರಶ್ನಿಸಿದರು. ಆಗ ಪಾಪನಾಯಕ ತನ್ನ ಜನ್ಮ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿದನು. ಮತ್ತು ಕೋರಮಲ್ಲನಾಯಕ ಬಾಳಾರಪಟ್ಟಮ್ಮ ಈ ಬಾಲಕನೆ ನಮ್ಮ ಮಗ ಎಂದು ಎಷ್ಟು ಹೇಳಿದರೂ ಇವರ ಕಟ್ಟುಕತೆಯನ್ನು ಊರಿನ ಹಿರಿಯರು ಒಪ್ಪಲಿಲ್ಲ. ನಿನ್ನ ಮಗನು ಈ ಹುಡುಗನೇ ಆಗಿದ್ದರೆ, ನೀವೇ ಅವನ ತಂದೆ ತಾಯಿಗಳಾಗಿದ್ದರೆ, ಅವನ ತಾಯಿಯ ಎದೆ ಹಾಲು ಅವನ ಬಾಯಿಯಲ್ಲಿ ಬೀಳಬೇಕು. ಆ ಏಳು ಹಚ್ಚಡಗಳ ತೆರೆಯನ್ನು ದಾಟಿ ಅವನ ಬಾಯಲ್ಲಿ ಬೀಳಬೇಕೆಂದು' ಹಿರಿಯರು ತಿಳಿಸಿದರು. 'ಬಾಳಾರಪಟ್ಟಮ್ಮ ಸೂರ್ಯ ಚಂದ್ರರನ್ನು ತನ್ನ ಇಷ್ಟ ದೇವರನ್ನು ನೆನೆದು, ದೇವ ನಾನು ಸತ್ಯಪಾಲಕಳಾಗಿದ್ದರೆ, ನನ್ನ ಮಗನಿಗೆ ನಿಜವಾಗಿ ಆಶೀರ್ವದಿಸಿದ್ದರೆ, ನಾನು ಕರೆಯುವ ನನ್ನ ಎದೆ ಹಾಲು ನನ್ನ ಮಗನ ಬಾಯಲ್ಲಿ ಬೀಳಲಿ ಎಂದು ದೇವರನ್ನು ಪ್ರಾರ್ಥಿಸಿ, ಪತಿಯ ಕಾಲಿಗೆ ನಮಸ್ಕರಿಸಿ, ಗುರುಹಿರಿಯರಿಗೆ ನಮಸ್ಕರಿಸಿ ತನ್ನ ಎದೆ ಹಾಲನ್ನು ಹಿಂಡಿದಳು. ಆ ಹಾಲು ಏಳು ಹಚ್ಚಡಗಳ ತೆರೆಯನ್ನು ದಾಟಿ ಪಾಪನಾಯಕನ ಬಾಯಲ್ಲಿ ಬಿದ್ದವು.' ಎಲ್ಲಾ ಹಿರಿಯರು ಆಶ್ಚರ್ಯ ಚಕಿತರಾದರು. ನೀನು ಮಹಾಸತಿ ಎಂದು ಆ ತಾಯಿಯ ಕಾಲಿಗೆ ಎರಗಿದರು.

ಕ್ಯಾಸಿಯ ಹಿರಿಯರ ಮಾತಿನ ಮೇರೆಗೆ ಪಾಪಯ್ಯನ ತಂದೆ-ತಾಯಿಗಳನ್ನು ಸೆರೆಮನೆ ಯಿಂದ ಬಿಡಲು ಒಪ್ಪಿಸಿದನು. ಆದರೆ ಇವರಿಗೆ ಸೇರುವ ದನಕರುಗಳನ್ನು ಬಿಡಲು ಒಪ್ಪಲಿಲ್ಲ. ಮತ್ತೆ ಪುನಃ ಪಂಚಾಯ್ತಿಗೆ ಸೇರಿಸಿದನು. ಕ್ಯಾಸಯ್ಯನ ಹತ್ತಿರ ನಿಮ್ಮ ದನಕರುಗಳು ಇರುವುದಕ್ಕೆ ಕುರುಹುಗಳೇನು ಎಂದು ಕೇಳಿದಾಗ ಕೋರಮಲ್ಲನಾಯಕ ಹಿರಿಯರನ್ನು ಕುರಿತು 'ಮಾನ್ಯರೆ, ನನ್ನ ತಂದೆ ಶ್ರೀಕೃಷ್ಣ ಪರಮಾತ್ಮನಿಂದ ದೊರೆತ ಎಲ್ಲಾ ಹಸುಕರುಗಳನ್ನು ಭಾವನಾದ ಕ್ಯಾಸಯ್ಯ ವಶಡಿಸಿಕೊಂಡಿದ್ದಾನೆ. ಆದರೆ ಕ್ಯಾಸಯ್ಯ ಅನ್ಯಾಯ ಮಾಡಿದ. ಇವರ ಹಸುಗಳು ಒಂದೂ ಇಲ್ಲ, ಎಲ್ಲಾ ಜನರು ನನ್ನಿಂದ ಸೋತು ಬಳುವಳಿಯಾಗಿ ಕೋಟ್ಯಾಂತರ ಹಸುಗಳು ಎಂದು ಅಪ್ರಾಮಾಣಿಕವಾಗಿ ನುಡಿದನು. ಊರಿನ ಪಂಚಾಯ್ತಿದಾರರು ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡರು. ಇದನೆಲ್ಲ ಅರಿತ ಪಾಪಯ್ಯ ಊರಿನ ಹಿರಿಯರು ನನ್ನ ಒಂದು ಮಾತನ್ನು ಆಲೈಸಬೇಕು, ನಾನು ಹೇಳುತ್ತಿರುವ ಮಾತು ನಮ್ಮ ಮಾವನವರು ನನ್ನ ತಂದೆಗೆ ಸಂಬಂಧಪಟ್ಟ ಹಸುಕರುಗಳೊಂದು ಇಲ್ಲ ಎಂದು ಹೇಳುತ್ತಿದ್ದಾರೆ. ಅದೆ ನಾನು ಅದೋ ಅಲ್ಲಿ ಕಾಣುವ ಕಲ್ಲು ಬಂಡೆಯ ಮೇಲೆ ನಿಂತು ಕಾಡಿನಲ್ಲಿ ಮೇಯುತ್ತಿರುವ ನಮ್ಮ ತಂದೆಗೆ ಸಂಬಂಧಪಟ್ಟ ಹಸುಗಳನ್ನು ಕರೆಯುತ್ತೇನೆ. ಅದು ನಿಜವಾಗಿದ್ದರೆ, ನಾನು ಕರೆದ ಕೂಡಲೇ ಬರುತ್ತವೆ. ಒಂದು ಷರತ್ತು, ನಾನು ಕರೆದ ಹಸುಗಳು ಬಂದರೆ, ಅವುಗಳನ್ನು ನಮ್ಮ

ತಂದೆಗೆ ಕೊಡಬೇಕು, ನನ್ನ ಅತ್ತೆಯನ್ನು ಸ್ವೀಕರಿಸಬೇಕು. ಗಳಗಂಟಗಾದ ಶೆಟ್ಟಿಯನ್ನು ಜೀತದಿಂದ ಮುಕ್ತರನ್ನಾಗಿ ಬಿಡಬೇಕು.' ಒಂದು ವೇಳೆ ದನಕರುಗಳು ಬಾರದಿದ್ದರೆ ನಾನು, ನನ್ನ ತಂದೆತಾಯಿಗಳು ಕ್ಯಾಸಯ್ಯನ ಮನೆಯಲ್ಲಿ ಸಾಯುವ ತನಕ ಜೀತದಾಳಾಗಿ ದುಡಿಯುತ್ತೇವೆ. ಈ ಷರತ್ತಿಗೆ ನಮ್ಮ ಮಾವನವರ ಒಪ್ಪಿಗೆಯನ್ನು ಕೇಳಿ ಎಂದು ಹಿರಿಯರನ್ನು ಕೇಳಿದನು. ಈ ಮಾತನ್ನು ಕೇಳಿದ ಎಲ್ಲಾ ಸಭಿಕರೆಲ್ಲರಿಗೂ ಆಶ್ಚರ್ಯವಾಯಿತು. ಕ್ಯಾಸಯ್ಯನಿಗೂ ಪರಮಾಶ್ಚರ್ಯವಾಯಿತು. ಒಂದು ಕಡೆ ಸಂತೋಷವಾಯಿತು. ಎಲ್ಲೋ ಇರುವ ದನಗಳನ್ನು ಇವನು ಕರೆದರೆ ಬರುವುದೆಂದರೇನು, ಇದೊಂದು ಹುಡುಗಾಟಿಕೆಯ ಮಾತಾಗಿದೆ. ಆಗಲಿ ಎಂದು ಈ ಷರತ್ತಿಗೆ ಒಪ್ಪಿಕೊಂಡನು.

ಪಂಚಾಯ್ತಿಯವರಿಗೆ ಇಬ್ಬರ ಅಭಿಪ್ರಾಯ ದೊರೆತ ನಂತರ ಪಾಪಯ್ಯ ನೀನಿನ್ನು ಹುಡುಗ, ಕೊಟ್ಟಮಾತಿನಂತೆ ನಡೆಯಬೇಕು. ಕೊಟ್ಟ ಮಾತು ಬಿಟ್ಟ ಬಾಣ ವಾಪಸು ಬರುವುದಿಲ್ಲ. ಆದ್ದರಿಂದ ಚೆನ್ನಾಗಿ ಯೋಚನೆ ಮಾಡಿ ಈ ಕಾರ್ಯದಲ್ಲಿ ಮಗ್ನನಾಗು ಎಂದು ತಿಳಿಸಿದರು. ಪಾಪನಾಯಕ 'ಆಗಲಿ ಸೂರ್ಯಚಂದ್ರರ ಸಾಕ್ಷಿಯಾಗಿ ನನ್ನನ್ನು ಆಶೀರ್ವದಿಸಿದ ಶಿವ ಪಾರ್ವತಿಯರ ಸಾಕ್ಷಿಯಾಗಿ ನನಗೆ ಜನ್ಮ ನೀಡಿದ ತಾಯಿಯ ಸಾಕ್ಷಿಯಾಗಿ, ಆಡಿದ ಮಾತನ್ನು ಮೀರುವುದಿಲ್ಲ. ನನ್ನ ವಯಸ್ಸು ಚಿಕ್ಕದಿರಬಹುದು. ನನ್ನ ಮಾತು ಚಿಕ್ಕದಲ್ಲ. ಸತ್ಯಕ್ಕೆ ಚ್ಯುತಿ ತರುವುದಿಲ್ಲ. ಎಂದು ತಿಳಿಸಿದ ಮೇಲೆ ಅಲ್ಲಿ ನರೆದಿದ್ದು ಹಿರಿಯರೆಲ್ಲರಿಗೂ ವಂದಿಸಿ, ತಂದೆ ತಾಯಿಯರ ಕಾಲಿಗೆ ನಮಸ್ಕರಿಸಿ, ಕಲ್ಲು ಬಂಡೆ ಕಡೆಗೆ ಹೊರಟನು. ಇವನ ತಂದೆ ತಾಯಿಯರ ಪರಮಾತ್ಮ ನನ್ನ ಮಗ ಆಡಿದ ಮಾತು ಹುಸಿಯಾಗದಂತೆ ನಡೆಸಿಕೊಡು ಎಂದು ದೇವರಲ್ಲಿ ಪ್ರಾರ್ಥಿಸಿದರು.

ಸೂರ್ಯಪಾಪನಾಯಕನು ಕಲ್ಲು ಬಂಡೆಯ ಬಳಿ ಬಂದು 'ಓನನ್ನ ಜನನಿ ಜನಕರಾದ ಶಿವ ಪಾರ್ವತಿಯರೇ, ಸತ್ಯನಾರಾಯಣನೇ ಶೇಷಮಹಾಶಯನೇ ನಿಮ್ಮೆಲ್ಲರ ಅನುಗ್ರಹ ನನ್ನ ಮೇಲೆ ಇರುವುದಾದರೆ ಈ ಪಂದ್ಯದಲ್ಲಿ ನನ್ನನ್ನು ಜಯಶೀಲನನ್ನಾಗಿ ಮಾಡಬೇಕು. ಈ ಪರೀಕ್ಷೆಯಲ್ಲಿ ನಾನು ಸೋತರೆ ಅಸತ್ಯವಂತನಾಗುತ್ತೇನೆ. ಈ ಕಲ್ಲು ಬಂಡೆ ಕೆಳಗಿಳಿಯದೇ ನೀವು ಕೊಟ್ಟ ಅಲುಗಿನಿಂದ ಇಲ್ಲಿಯೇ ನನ್ನ ಶಿರಚ್ಛೇದನ ಮಾಡಿಕೊಂಡು, ನಿಮ್ಮ ಸಾನಿಧ್ಯವನ್ನು ಸೇರುತ್ತೇನೆ. ಮನದಲ್ಲಿ ಧ್ಯಾನಿಸಿ ಸೂರ್ಯ ಚಂದ್ರರಿಗೆ ಭೂದೇವಿಗೆ ವಂದಿಸಿ ಕಲ್ಲು ಬಂಡೆಯ ಮೇಲೆ ಹತ್ತಿದನು.

ಈ ಸತ್ಯ ಪರೀಕ್ಷೆಯಲ್ಲಿ ವೀಕ್ಷಿಸಲು ಸಾವಿರಾರು ಜನ ನೆರೆದರು. ಈ ಹುಡುಗನು ಆಡಿದ ಮಾತಿನಲ್ಲಿ ಸತ್ಯವಿದೆಯೇ, ಇವನು ಕೂಗಿದ ಮಾತ್ರಕ್ಕೆ ಮೇಯುತ್ತಿರುವ ದನಕರುಗಳು ಬರಲು ಸಾಧ್ಯವೇ? ಎಲ್ಲೂ ಕಾಣದ ಕೇಳದ ವಿಷಯ ಎಂದು ತಮ್ಮ ತಮ್ಮಲ್ಲಿ ಆಡಿಕೊಂಡರು. ಪಾಪನಾಯಕನು ಕಲ್ಲು ಬಂಡೆಯ ಮೇಲೆ ನಿಂತು ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನೋಡಿದನು. ಹತ್ತಿರದಲ್ಲಿ ದನಕರುಗಳು ಕಾಣಿಸಲಿಲ್ಲ. ಪಾಪನಾಯಕನು ಶ್ರೀಮನ್ನಾರಾಯಣನನ್ನು ನೆನೆದು, ಗೋಪಾಲರಕ್ಷಕ, ನನ್ನ ತಂದೆಗೆ

ಸಂಬಂಧ ಪಟ್ಟ ಹಸುಗಳಲ್ಲಿ ನನ್ನ ಕೂಗಿಗೆ ಬರುವಂತೆ ಅನುಗ್ರಹಿಸಿ ಎಂದು ಕಣ್ಮುಚ್ಚಿ ಬೇಡುತ್ತಾ ನಿಂತನು. ಭಕ್ತ ಪರಾಧೀನನಾದ ಪರಮಾತ್ಮನಿಗೆ ಪಾಪನಾಯಕನ ಬೇಡಿಕೆ ಕೇಳಿದಂತಾಗಿ ನಾಯಕನಿಗೆ ಕಾಣಿಸಿಕೊಂಡು 'ಅಯ್ಯಾ ಪಾಪಯ್ಯಾ ಚಿಂತಿಸದಿರು ಇಲ್ಲಿಂದಲೇ ನಿನ್ನ ತಂದೆ ತಾಯಿಗೆ ಸಂಬಂಧ ಪಟ್ಟ ಹಸುಗಳನ್ನು ಕರೆ ಎಲ್ಲವೂ ಬರುತ್ತವೆ. ನಿನ್ನ ಪ್ರತಿಜ್ಞೆ ಫಲಿಸುತ್ತದೆ'. ಎಂದು ಹೇಳಿ ಅಂತರ್ಧಾನನಾದನು. ಪಾಪನಾಯಕನು ಕಣ್ತೆರೆದು ನೋಡಲಾಗಿ ಹರಿದಾರಿ ದೂರದಲ್ಲಿದ್ದರೂ ಸಹ ದನಕರುಗಳು ಅವು ತನ್ನ ಸುತ್ತ ಮುತ್ತಲೂ ಇರುವಂತೆ ಭಾಸವಾಯಿತು.

'ಅಮ್ಮಾ ಗೋಮಾತೆಯರೇ ನನ್ನಲ್ಲಿ ಇರುವುದಾದರೆ ಈಗ ನಾನು ಕರೆದಾಕ್ಷಣ ನೀವೆಲ್ಲರೂ ಇಲ್ಲಿ ಬಂದು ನಿಲ್ಲಬೇಕೆಂದು ಧ್ಯಾನಿಸಿ, ಗಟ್ಟಿಯಾದ ಕೂಗಿನಿಂದ ನೆರೆದ ಜನಸ್ತೋಮಕ್ಕೆ ಕೇಳುವಂತೆ, 'ಅಮ್ಮ ನಮ್ಮ ತಾಯಿ ಬಾಳಾರಪಟ್ಟಣಮ್ಮನ ಗೋಮಾತೆಯರೇ ತಂದೆ ಕೋಲರಮಲ್ಲನಾಯಕನ ಗೋಮಾತೆಯರೇ, ನೀವು ಎಲ್ಲಿದ್ದರೂ ಕೂಡಲೇ ಬರಬೇಕು'. ಪಾಪನಾಯಕ ಗಟ್ಟಿಯಾಗಿ ಕೂಗ ತೊಡಗಿದ ಕೂಗು ಹರಿದಾರಿಯಲ್ಲಿದ್ದ ಗೋವುಗಳಿಗೆ ಕೇಳಿಸಿತು. ಈ ಪಾಪಯ್ಯನ ಕೂಗನ್ನು ಕೇಳಿದ ಕೂಡಲೇ ಎಲ್ಲಾ ಗೋವುಗಳು ಮೇಯುವುದನ್ನು ಬಿಟ್ಟು ಸೆಟೆದು ನಿಂತವು. ಎರಡನೆಯ ಕೂಗಿಗೆ ಎಲ್ಲಾ ದನಕರುಗಳು ಒಂದಾಗಿ ಕಿವಿ ನಿಮಿರಿಸಿ, ಈ ಶಬ್ದವನ್ನು ಕೇಳ ತೋಡಗಿದವು. ಈ ಎಲ್ಲಾ ದನಕರುಗಳು ಗುಂಪಾಗಿ ಇರುವುದನ್ನು ಕಂಡ ದನಗಾಹಿಗಳು ಯಾವುದೋ ಪ್ರಾಣಿಯಿಂದ ಬೆದರಿರಬಹುದೇ ಎಂದು ಪೊದೆಗಳಲ್ಲಿ ಕಾಡು ಮೃಗಗಳನ್ನು ಹುಡುಕಲು ತೊಡಗಿದರು. ಕ್ಯಾಸಯ್ಯನಿಗೆ ಸಂಬಂಧ ಪಟ್ಟ ಹಸುಗಳು ಸುಮ್ಮನೆ ಮೇಯುತ್ತಿದ್ದವು. ಇದನ್ನು ಕಂಡ ದನಗಾಹಿಗಳಿಗೆ ಆಶ್ಚರ್ಯವಾಯಿತು. ಪಾಪನಾಯಕನ ಎರಡನೆಯ ಕೂಗಿಗೂ ಹಸುಗಳು ಬಾರದಿರುವುದನ್ನು ಕಂಡ ಜನ ನಾನಾ ರೀತಿಯಲ್ಲಿ ಮಾತನಾಡತೊಡಗಿದರು. ಕ್ಯಾಸಯ್ಯನಿಗೆ ಅತ್ಯಾನಂದವಾಯಿತು.

ಪಾಪನಾಯಕನಿಗೆ ಭಯವಾಯಿತು. ಸ್ವಾಮಿಯ ಮೂರನೆಯ ಕೂಗಿಗೆ ಹಸುಗಳು ಬರಲಿಲ್ಲವೆಂದರೆ, ನೀನು ನೀಡಿದ ಅಲಗುನಿಂದ ಈ ನನ್ನ ಶಿರಚ್ಛೇದನ ಮಾಡಿಕೊಂಡು ಶಿರಸ್ಸನ್ನು ನಿನ್ನ ಪಾದಾರವಿಂದಗಳಿಗೆ ಅರ್ಪಿಸುತ್ತೇನೆ. ಜಗತ್ತಿನಲ್ಲಿ ಅಸತ್ಯವಂತನಾಗಿ ಬಾಳುವುದಕ್ಕಿಂತ ನಿನ್ನ ಸಾನಿಧ್ಯವನ್ನು ಸೇರುವುದೇ ಒಳಿತು' ಎಂದು ಕಣ್ಮುಚ್ಚಿ ಮನದಲ್ಲಿ ನಾರಾಯಣನನ್ನು ಧ್ಯಾನಿಸಿದನು. ಪಾಪನಾಯಕನು ಮೂರನೆಯ ಕೂಗನ್ನು ಕೂಗಿದ

ಗೋಮಾತೆಯರಾದ ತುಂಗೆ, ಭದ್ರೆ, ಗಂಗೆ ನನ್ನಲ್ಲಿ ಸತ್ಯ ಇರುವುದಾದರೆ, ನನ್ನ ತಾಯಿ ಪತಿವ್ರತೆಯಾಗಿದ್ದರೆ, ನಿರ್ದೋಶಿಯಗಿದ್ದರೆ, ನನ್ನ ಮೂರನೆಯ ಕೂಗಿಗೆ ಬರಬೇಕು ನೀವುಗಳು ಬರದಿದ್ದರೆ, ಇಲ್ಲಿಗೆ ನನ್ನ ಜೀವನ ಕೊನೆ ಎಂದು ಕೈ ಮುಗಿದು ಅಮ್ಮ ಗೋಮಾತೆಯರೆ, ಎಲ್ಲಿದ್ದರೂ ಬರ್ರಿ ಬರ್ರಿ ಓಡಿ ಬರ್ರಿ, ನಿಮ್ಮ ಪಾದಗಳಿಗೆ ವಂದಿಸುತ್ತೇನೆ'. ಎಂದು ಗಟ್ಟಿಯಾಗಿ ಕೂಗಿ ಕೈ ಮುಗಿದು

ಕಣ್ಮುಚ್ಚಿ ನಿಂತುಕೊಂಡನು. ಗೋವುಗಳ ಸುಳಿವು ಕಾಣದ ನೆರೆದಿದ್ದ ಜನರಿಗೆಲ್ಲ ಇವನೊಬ್ಬ ಹುಚ್ಚ ಇವನ ಮಾತುಗಳನ್ನು ನಾವೆಲ್ಲ ನಂಬಿ ಇಲ್ಲಿಗೆ ಬಂದು ನಾವೂ ಕೂಡ ಹುಚ್ಚರಾದೆವು. ಎಂದು ಮಾತನಾಡಿಕೊಳ್ಳುತ್ತಿದ್ದರು.ಹರಿದಾರಿ ದೂರದಲ್ಲಿದ್ದ ಹಸುಗಳಿಗೆ ಪಾಪನಯಕನ ಕೂಗು ಕೇಳಿದ್ದೆ ತಡ ನೂರಾರು ಹಸುಗಳು, ಬಾಲಗಳನ್ನು ಎತ್ತಿಕೊಂಡು ಅಂಬಾ ಎನ್ನುತ್ತ ಕಾಲಿನಿಂದ ನೆಲವನ್ನು ಕೆದರಿ ಛಂಗನೆ ಮೇಲಕ್ಕೆ ಹಾರಿ ಓಡುತ್ತಾ ಬಂದವು. ಇವುಗಳ ಓಟವನ್ನು ಕಂಡ ದನಗಾಹಿಗಳು ಅಡ್ಡ ಗಟ್ಟಿದರೂ ನಿಲ್ಲದೇ, ಆರ್ಭಟಿಸುತ್ತಾ ಓಡತೊಡಗಿದವು. ಹಸುಗಳು ಆರ್ಭಟದಿಂದ ಕೆಂದೂಳು ಹಾರಿ ಮುಗಿಲು ಮುಟ್ಟಿತು. ಜನರು ಆ ಕೆಂದೂಳನ್ನು ನೋಡಿ ಭಯಬೀತರಾದರು. ಹಸುಗಳು ಬಂದವು ಎಂಬ ಕೂಗು ಮುಗಿಲು ಮುಟ್ಟಿತು. ದೂಳು ಹತ್ತಿರ ಹತ್ತಿರ ಬಂದರೂ ಅದರಲ್ಲಿ ದನಗಳು ಕಾಣುತ್ತಿರಲಿಲ್ಲ. ಹಸುಗಳ ಓಟ ಮಿತಿ ಮೀರಿತ್ತು ಪ್ರಾಣದ ಹಂಗು ತೊರೆದು ಬಾಲಗಳನ್ನು ಮೇಲೆತ್ತಿ ಓಡಿ ಬರುತ್ತಿದ್ದವು. ಇದನ್ನು ನೋಡಿದರೆ ದೇವಲೋಕದಿಂದ ಕಾಮಧೇನುಗಳು ಇಳಿದು ಬರುತ್ತಿವೆಯೇನೋ ಎಂಬಂತೆ ಕಾಣುತ್ತಿತ್ತು.

ಈ ರೀತಿಯಾಗಿ ಹಸುಗಳು ಓಡೋಡಿ ಬಂದು ಪಾಪನಾಯಕನು ನಿಂತ ಕಲ್ಲು ಬಂಡೆಯ ಸುತ್ತ ಗಟ್ಟಿ ಅವನನ್ನು ಪ್ರದಕ್ಷಿಣೆ ಹಾಕುವಂತೆ ಸುತ್ತುವರೆಯುತ್ತಿದ್ದವು. ಗಂಗೆ ಎಂಬ ಹಸು ಪಾಪನಾಯಕನ ಮುಂದೆ ನಿಂತು ತಾಯಿಯನ್ನು ಕಂಡಾಗ ಕರು, ಅಂಬ ಎಂಬುದಾಗಿ ಅರಚಿಕೊಳ್ಳುವಂತೆ ಕೂಗಿಕೊಂಡಿತು. ಗಂಗೆ ಹಸುವಿನ ಅರ್ತನಾದದಿಂದ ಪಾಪಯ್ಯನಿಗೆ ಎಚ್ಚರವಾಗಿ ಪ್ರಜ್ಞೆ ಬಂದಿತು. ನೂರಾರು ಹಸುಗಳು ತನ್ನ ಸುತ್ತ ಇರುವುದನ್ನು ಕಂಡು ಆನಂದಭರಿತವಾಗಿ ಕಲ್ಲು ಬಂಡೆಯಿಂದ ಕೆಳಗಿಳಿದು ಹಸುಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಗೈದು, ತಾಯಿ ಗೋಮಾತೆಯರೇ ನನ್ನ ಪ್ರಾಣವನ್ನು ಉಳಿಸಿದಿರಿ. ನಿಮಗೆ ಅನಂತ ಧನ್ಯವಾದಗಳು ಎಂದು ವಂದಿಸಿ ತನ್ನ ಕರಿಕಂಬಳಿಯನ್ನು ಹೆಗಲ ಮೇಲೆ ಹಾಕಿಕೊಂಡು ಅಗಲನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ಕೈಯಲ್ಲಿ ಕೋಲು ಹಿಡಿದು ಮುಂದೆ ಮುಂದೆ ನಡೆದನು. ಹಿಂದೆ ಹಿಂದೆ ಹಸುಗಳು ಬಂದವು. ಈ ದೃಶ್ಯವನ್ನು ಕಂಡ ಜನಸ್ತೋಮ ಇವನು ಸಾಮಾನ್ಯ ಹುಡುಗನಲ್ಲ ಎಂದು ಪಾಪನಾಯಕನ ಕಾಲಿಗೆ ಎರಗಿದರು. ಇನ್ನೂ ಕ್ಯಾಸಯ್ಯನಿಗೆ ಉಳಿಗಾಲವಿಲ್ಲದಂತಾಯಿತು. ಕ್ಯಾಸಯ್ಯನ ಮನದಲ್ಲಿ ಭಯ, ಭೀತಿ ಆವರಿಸಿತು. ಇವನು ಸಾಮಾನ್ಯನಲ್ಲ. ಇವನ ಮುಂದೆ ನನ್ನ ಆಟ ಏನೂ ನಡೆಯದು ಎಂದು ತೀರ್ಮಾನಿಸಿದ. ಪಾಪನಾಯಕನ ಕಾಲಿಗೆ ಇವನೂ ಸಹ ನಮಸ್ಕರಿಸಿದನು. ' ನಾನು ತಪ್ಪು ಮಾಡಿದ್ದೇನೆ. ನಿನ್ನ ತಂದೆ ತಾಯಿಯರನ್ನು ಸೆರೆಮನೆಯಿಂದ ಬಿಡುಗಡೆ ಮಾಡುತ್ತೇನೆ. ನಿನ್ನ ಅತ್ತೆಯಾದ ಪಾಲಮ್ಮಳನ್ನು ನಾನು ಸ್ವೀಕರಿಸುತ್ತೇನೆ. ಶೆಟ್ಟರನ್ನು ನನ್ನ ಬಂಧನದಿಂದ ಬಿಡುಗಡೆ ಮಾಡುತ್ತೇನೆ. ಅಲ್ಲದೇ ನನ್ನ ಮನೆಯಲ್ಲಿ ದುಡಿದಿದ್ದರ ಫಲವಾಗಿ ಈ ನನ್ನ ದನಗಳ ಹಿಂಡಿನಲ್ಲಿ ಅರ್ಧಭಾಗದ ಹಸುಗಳನ್ನು ಶೆಟ್ಟಿಗೆ ಕೊಡಿಸುತ್ತೇನೆ'. ಎಂದು ಊರ ಜನರ ಮಧ್ಯ ಪಾಪನಾಯಕನಲ್ಲಿ ಕ್ಷಮೆ ಬೇಡಿದನು. ನಂತರ ಪಾಪನಾಯಕನು

ಹಿರಿಯರ ಅಪ್ಪಣೆ ಪಡೆದು ಮಾವ ಕ್ಯಾಸಯ್ಯನಿಗೆ ವಂದಿಸಿ, ಇನ್ನಾದರೂ ಸತ್ಯವಂತನಾಗಿ ಧರ್ಮವಂತನಾಗಿ ಬಾಳು ಎಂದು ಆಶೀರ್ವದಿಸಿ, ತನ್ನ ತಂದೆ ತಾಯಿಯವರಿಗೆ ನಮಸ್ಕರಿಸಿ ತನ್ನ ನಿವಾಸಕ್ಕೆ ಹೊರಟನು. ಜನರೆಲ್ಲರೂ ಪಾಪನಯಕನಿಗೆ ವಂದಿಸಿದರು.

**ಪಾಪನಾಯಕನು ದುರ್ಗಿಯೆಂಬ ರಾಕ್ಷಸಿಯನ್ನು ನಾಶಮಾಡಿದ್ದು**

ಪಾಪನಾಯಕ ಕೋರಿಕಂಬಳಿಯನ್ನು ಹೊದ್ದು, ಕೈಯಲ್ಲಿ ಕೋಲನ್ನು ಹಿಡಿದು, ಸೂರ್ಯನಂದನ ಕೈತಾರಿಯನ್ನು ಕೈಯಲ್ಲಿ ಹಿಡಿದು, ಓರೆಗಲ್ಲು ಪಟ್ಟಣಕ್ಕೆ ಬಂದನು. ಅಲ್ಲಿ ದುರ್ಗಿ ಎಂಬ ಹಾವಳಿಯಿಂದ ಜನರು ಭಯಭೀತರಾಗಿದ್ದರು. ದುರ್ಗಿಯಿಂದ ನಮ್ಮನ್ನು ಕಾಪಾಡು ಎಂದು ಪಾಪನಾಯಕನ ಮೊರೆಹೊಕ್ಕರು. ದುರ್ಗಮ್ಮನ ಕೆರೆಯ ಏರಿಯ ಮೇಲೆ ನಿಂತು

'ಎಲೈ ಏಳು ನಾಲಿಗೆ ದುರ್ಗಿಯೇ ಎಲ್ಲಿ ಅಡಗಿರುವೆ, ಹೊರಗೆ ಬಾ. ನಿನ್ನ ಪಾಲಿಗೆ ಯಮಧರ್ಮನಾದ ನಾನು ಬಂದಿದ್ದೇನೆ' ಎಂದು ಕರೆದ. ಆಗ ದುರ್ಗಿಯು ಒಬ್ಬ ಬಡ ಜೋಗಿಯು ನನ್ನನ್ನು ಈ ರೀತಿ ಕರೆಯುವುದೇ ಎಂದು ಕೋಪೋದ್ರೇಕಳಾಗಿ ರೂಪ ತಾಳಿ' ಎಲವೋ ಪೋರ, ನನ್ನೆದುರಿಗೆ ಮಾತನಾಡುವ ಸೊಕ್ಕೆ ನಿನಗೆ, ಸುಮ್ಮನೆ ಹೊರಟು ಹೋಗು ಎಂದು ಬೆಂಕಿಯ'ನ್ನು ತುಳಿದುಕೊಂಡು, ಬಾಯನ್ನು ಅಗಲ ಮಾಡಿಕೊಂಡು ಪಾಪನಾಯಕನ ಹತ್ತಿರ ಬಂದಳು. ಆಗ ಪಾಪನಾಯಕನು ಆಕೆಯ ತಲೆಯನ್ನು ಹಿಡಿದು ಗರಗರನೆ ತಿರುಗಿಸಿ, ಸೂರ್ಯ ನಂದನ ಕಠಾರಿಯಿಂದ ಅವಳ ಮುಂಗಾಲನ್ನು ಕತ್ತರಿಸಿ ಬಿಸಾಡಿದನು. ಆಗ ದುರ್ಗಿಯು ಅಪಾರವಾದ ನೋವನ್ನು ಅನುಭವಿಸುತ್ತಾ ನೀನು ಕೂಡ ನಿನ್ನ ಅಂತ್ಯಕಾಲದಲ್ಲಿ ಹೀಗೆಯೇ ಒಂದು ಹೆಣ್ಣಿನಿಂದ ಕಾಲು ಕಳೆದುಕೊಂಡು ಪ್ರಾಣನೀಗುವನಾಗು' ಎಂದು ಶಾಪಕೊಟ್ಟಳು. ಪಾಪನಾಯಕನು ಈ ಶಾಪವನ್ನು ಲೆಕ್ಕಿಸಲಿಲ್ಲ. ಕೆರೆಗೆ ಇಂದಿನಿಂದ ದುರ್ಗಿಯ ಹೆಸರನ್ನು ತೆಗೆದು 'ಜಗಳೂರಜ್ಜನ ಕೆರೆ' ಎಂದು ಹೆಸರನ್ನು ಇಟ್ಟನು. ಆದರೆ ಮುಂದೆ ತನಗೆ ಸಲ್ಲಿಸುವ ಪೂಜೆಯಲ್ಲಿ ದುರ್ಗಿಗೂ ಒಂದು ಪೂಜೆ ಸಲ್ಲಲ್ಲಿ ಎಂದನು.

ಇಂದಿಗೂ ಈ ದುರ್ಗಿ ಗುಡಿ ಜಗಳೂರಜ್ಜನ ಕೆರೆಯ ಬಳಿ ಕಾಣಬಹುದು. ಅಲ್ಲೇ ಸೂರ್ಯನಂದನ ಕಠಾರಿಯನ್ನು ಇಟ್ಟನು. ಅದಕ್ಕೆ ಇಂದಿಗೂ ಪೂಜಿಸುತ್ತಾರೆ.

ಬೆಳಗಟ್ಟದ ಸೂರ್ಯಯರಗಟ್ಟಿನಾಯಕನು ಗೊನೂರು ಸಂಸ್ಥಾನದಲ್ಲಿ ಕೊಂಡ ಮುರಿರಾಜನ ದೇವ ದನಗಳನ್ನು ಕಾಯುವ ದನಗಾಹಿಯಾಗಿದ್ದನು. ಪಾಪನಾಯಕನು ತನ್ನ ದೊಡ್ಡಪ್ಪನಾದ ಯರಗಟ್ಟನಾಯಕನ ಬಳಿ ಹೋಗಿ ತನ್ನ ಜೀವನದ ಕಥೆಯನ್ನು ಹೇಳಿದಾಗ ಯರಗಟ್ಟನಾಯಕನಿಗೆ ತುಂಬಾ ಸಂತೋಷವಾಯಿತು. ಆಗ ತನ್ನಲ್ಲಿದ್ದ ಮುಕ್ಕಣ್ಣನ ಕಠಾರಿಯನ್ನು ಕೊಟ್ಟನು.ಮುಕ್ಕಣ್ಣನ ಕಠಾರಿಯನ್ನು ಪಡೆದು ವಾಪಸ್ ಬರುವಾಗ ಗೊಂಡಳ್ಳಿ ಮಾರ್ಗವಾಗಿ ಬರುವಾಗ ಗೊಂದಳ್ಳಿ

ಗೊಲ್ಲರು ಪಾಪನಾಯಕನಿಗೆ ತಮ್ಮ ಜ್ಞಾಪಕಾರ್ಥವಾಗಿ ಕೆಲವು ಜೆನ್ನಿ ಹಸುಗಳನ್ನು ಕೊಟ್ಟರು. ತನ್ನ ದೊಡ್ಡಪ್ಪನಿಂದ ಮುಕ್ಕಣ್ಣನ ಕಠಾರಿಯನ್ನು ಗೊಲ್ಲರಿಂದ ಜನಿಗೆ ಹಸುಗಳನ್ನು ಪಡೆದುಕೊಂಡು ಬರುವ ವೇಳೆಗೆ ಶಿವಶರಣೆ ದಾನ ಸಾಲಮ್ಮನ ಅಮೂಲ್ಯ ಒಡವೆಗಳಾದ ಒಲಮುರಿಶಂಖ, ಚಕ್ರ ಬಂಗಾರದ ಕೊಳಲು, ಸಾಲಿಗ್ರಾಮ (ಕೆಲವರು ಹೇಳುವಂತೆ ಪೆಟ್ಟಿಗೆ ದೇವರುಗಳನ್ನು)ಕಳ್ಳರು ಅಪಹರಿಸಿಕೊಂಡು ಹೋದದ್ದನ್ನು ತನ್ನ ತಂದೆಯಿಂದ ತಿಳಿದ ಪಾಪನಾಯಕನು ತನ್ನ ಯೋಗ ದೃಷ್ಟಿಯಿಂದ ಯಾರು ಕದ್ದಿರುವರೆಂದು ಅರಿತು ತನ್ನ ನಾಗಮುರಿ ಬೆತ್ತವನ್ನು ಕಂಪಳ ದೇವರ ಜಾತ್ರೆಯಲ್ಲಿ ಬಿಟ್ಟನು. ನಾಗಮುರಿ ಬೆತ್ತದ ಸಹಾಯದಿಂದ ಕಳ್ಳರು ಸಿಕ್ಕರು. ಈತನ ಶಕ್ತಿ ತಿಳಿದು, ಅವರೇ ಶರಣಾಗತರಾಗಿ ಕೈ ಮುಗಿದು ಎಲ್ಲಾ ಒಡವೆಗಳನ್ನು ಕೊಟ್ಟುಬಿಟ್ಟರು. ಆಗ ಕಂಪಳ ದೇವರ ಹಟ್ಟಿಯ ರಂಗನಾಥ ಸ್ವಾಮಿಗೆ ನೂರಾಒಂದು ಪೂಜೆಯನ್ನು ಮಾಡಿಸಿ, ತಾನು ತಂದಿದ್ದ ಮುಕ್ಕಣ್ಣನ ಕಠಾರಿಯನ್ನು ಅಲ್ಲಿಯೇ ಸ್ಥಾಪಿಸಿದನು. ಅದನ್ನು ಇಂದಿಗೆ ಪಾಪನಾಯಕನ ಸಂಕೇತವಾಗಿ ಪೂಜಿಸುತ್ತಾರೆ. ಅಲ್ಲದೇ ರಂಗನಾಥ ಸ್ವಾಮಿಯ ಜಾತ್ರೆಯಂತೆ, ಪಾಪನಾಯಕನ ಜಾತ್ರೆಯು ನಡೆಸುತ್ತದೆ. ಇಲ್ಲಿಗೆ ತಿಮ್ಮಪ್ಪನ ಎರಡನೆಯ ವರವು ಫಲಿಸಿತು.

**ಜಗಳೂರು ಜಗಪತಿರಾಯನ ಆಸ್ಥಾನದಲ್ಲಿ ಪಾಪನಾಯಕನ ಅಂತ್ಯ**

ಪಾಪನಾಯಕನು ಸಿಡಿಲು ಮಿಂಚಿನ ಕಠಾರಿಯನ್ನು ಕುರಿತು ತನ್ನ ದೊಡ್ಡಪ್ಪನಾದ ಯರಗಟ್ಟಿನಾಯಕನನ್ನು ವಿಚಾರಿಸಿದಾಗ, ಜಗಳೂರು ಜಗಪತಿ ಬಳಿ ಇದೆ ಎಂಬ ವಿಷಯ ತಿಳಿದ. ಅಂದು ಕೊಂಡಮುರ್ರಿ ರಾಜನ ದನಗಳನ್ನು ಯರಗಟ್ಟಿನಾಯಕನ ಬದಲು, ಪಾಪನಾಯಕನು ಮೇಯಿಸಲು ಅರಣ್ಯಕ್ಕೆ ಹೋಗಿದ್ದನು. ಸೂರ್ಯ ಮುಳುಗಿದರೂ, ದನಗಳು ಬರದೇ ಇರುವುದರಿಂದ, ರಾಜ ತನ್ನ ಆಳುಗಳನ್ನು, ದನಗಳನ್ನು ಹುಡುಕಲು ಕಳುಹಿಸಿದ. ಅಲ್ಲಿ ಪಾಪನಾಯಕ ಕೂಡಿಹಾಕಿಕೊಂಡು ವಿಶ್ರಾಂತಿಗಾಗಿ ಮರದಡಿಯಲ್ಲಿ ಕೂತಿದ್ದನು. ಇದನ್ನು ಕಂಡ ಆಳುಗಳು ರಾಜನಲ್ಲಿ ಬಂದು ಹೇಳಿದಾಗ, ರಾಜನಿಗೆ ಕೋಪವುಕ್ಕಿತು. ಆಳುಗಳು ಪಾಪನಾಯಕನ್ನು ಹಿಡಿದು ಎಳೆಯಲು ಬಂದಾಗ ಅವನಲ್ಲಿದ್ದ ನಾಗಮುರಿಬೆತ್ತವು ನಾಗರಹಾವಾಗಿ ಕಂಡಿತು. ರಾಜನಿಗೆ ಪವಾಡ ಪುರುಷನಿರಬೇಕೆಂದು, ಸ್ವಾಮಿ ನೀವು ಯಾರು? ಎಂದಾಗ ನಾನು 'ಪರದೇಶಿ ಪಾಪಯ್ಯ ಎಂತಲೂ, ಸಿಡಿಲು ಮಿಂಚು ಕಠಾರಿಯನ್ನು ತಿಳಿಯಲು ನನ್ನ ದೊಡ್ಡಪ್ಪನ ಬಳಿ ಬಂದಿದ್ದೆ' ಎಂದಾಗ, ಕೊಂಡಮುರ್ರಿ ರಾಜನಿಗೆ ಆನಂದವಾಯಿತು. ಏಕೆಂದರೆ, ಅವನಿಗೂ ಜಗಪತಿರಾಯನಿಗೂ ಬಹುಕಾಲ ದ್ವೇಷವಿತ್ತು. ಈ ಪುರುಷನಿಂದ ಜಗಪತಿರಾಯನ ನಾಶವಾಗುವುದರಲ್ಲಿ ಸಂಶಯವಿಲ್ಲವೆಂದು ಪಾಪನಾಯಕನ ಸಹಾಯಕ್ಕಾಗಿ ಏಳು ಜನ ಭಂಟರನ್ನು ಕಳುಹಿಸಿಕೊಟ್ಟನು.

ಈಗಿರುವ ಜಗಳೂರು ಪ್ರದೇಶದಲ್ಲಿ ಜಗಪತಿರಾಜ ಎಂಬುವನು ರಾಜ್ಯಭಾರ ಮಾಡುತ್ತಿದ್ದನು. ತನ್ನ ಪಟ್ಟಣದ ಸುತ್ತ ಕೋಟೆ ಕೊತ್ತಲಗಳನ್ನು ಕಟ್ಟಿಸಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಹೆಬ್ಬಾಗಿಲುಗಳನ್ನು

ಮಾಡಿ, ನಾಲ್ಕು ಬತೇರಿಗಳನ್ನು ಕಟ್ಟಿಸಿಕೊಂಡು, ದಂಡುದಳ ಸಹಿತ ರಾಜ್ಯಭಾರ ಮಾಡುತ್ತಿದ್ದನು. ತನ್ನ ಸುತ್ತಮುತ್ತಲಿನ ಜನರಿಗೆ ಅನ್ಯಾಯದ ತೆರಿಗೆಯನ್ನು ಹಾಕುತ್ತಿದ್ದನು. ಅಲ್ಲದೆ ಗೋಗುದ್ದಿನ ಬಳಿ ಒಂದು ನೆಲಮಾಳಿಗೆಯನ್ನು ಕಟ್ಟಿಸಿ ಮುನ್ನೂರು ಜಟ್ಟಿಗಳನ್ನು ಬಿಟ್ಟಿದ್ದನು. ಅವರು ರಾತ್ರಿಯೆಲ್ಲಾ ಕಳ್ಳತನ ಮಾಡುತ್ತಿದ್ದರು. ಅದರ ಆದಾಯದಿಂದ ರಾಜ ಶ್ರೀಮಂತನಾಗಿದ್ದನು. ಅಲ್ಲದೆ, ಚಿಕ್ಕ ಸಂಸ್ಥಾನಗಳನ್ನು ವಶಪಡಿಸಿಕೊಂಡು ಅವುಗಳ ಸುತ್ತ ಕೋಟೆಕೊತ್ತಲಗಳನ್ನು ಕಟ್ಟಿಸಿ, ಇವುಗಳ ಸುತ್ತ ಕಂದಕಗಳನ್ನು ನಿರ್ಮಿಸಿ, ಅವುಗಳಲ್ಲಿ ನೀರು ತುಂಬಿ ಮೊಸಳೆಗಳನ್ನು ಬಿಟ್ಟುಕೊಂಡು, ತನ್ನ ವಿರುದ್ಧ ನಡೆದುಕೊಂಡವರನ್ನು ಈ ಮೊಸಳೆಗಳಿಗೆ ಆಹುತಿಯಾಗಿ ಕೊಡುತ್ತಿದ್ದನು. ಅಲ್ಲದೆ ಸುತ್ತಮುತ್ತಲಿನ ರಾಜರಿಂದ ಕಪ್ಪಕಾಣಿಕೆಗಳನ್ನು ಪಡೆದುಕೊಂಡು ರಾಜ್ಯವನ್ನು ಆಳುತ್ತಿದ್ದನು.

ಮಾರನೆಯ ದಿನ ಪಾಪನಾಯಕನು ಏಳು ಜನ ಭಂಟರೊಡನೆ ಜಗಳೂರನ್ನು ಪ್ರವೇಶಿಸಿದನು. ಜಗಳೂರಿನ ಜನತೆ ಈತನನ್ನು ಕಂಡು ಭಕ್ತಿಯಿಂದ ವಂದಿಸಿದರು. ಪ್ರತಿಯೊಬ್ಬರೂ ಜಗಪತಿರಾಯನ ದಬ್ಬಾಳಿಕೆಗೆ ಒಳಗಾಗಿರುವುದಾಗಿ ಆತನ ಕೈಯಿಂದ ತಮ್ಮನ್ನು ಪಾರು ಮಾಡಬೇಕೆಂದು, ಅವನು ಮಾಡುವ ಹೇಯಕೃತ್ಯಗಳನ್ನು ಪಾಪನಾಯಕನಿಗೆ ಸವಿಸ್ತಾರವಾಗಿ ತಿಳಿಸಿದರು.

ಊರೊಳಗೆ ಒಬ್ಬರು ಕೋರಿಯನ್ನು ಧರಿಸಿ ಕೈಯಲ್ಲಿ ಬೆತ್ತವನ್ನು ಹಿಡಿದವನ ಮುಂದೆ ಜನರು ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದರು. ರಾಜನ ಭಂಟನೊಬ್ಬ ನೋಡಿ ರಾಜನಿಗೆ ಈ ವಿಷಯವನ್ನು ಬಂದು ಹೇಳಿದನು. ಆಗ ರಾಜ ಹೋಗಿ ಆ ಬಡ ಜೋಗಿಯನ್ನು ಎಳೆದುಕೊಂಡು ಬನ್ನಿ ಎಂದು ಆಜ್ಞಾಪಿಸಿದನು. ಭಂಟರ ಆಜ್ಞೆಯ ಮೇರೆಗೆ ಪಾಪನಾಯಕನನ್ನು ಎಳೆದುಕೊಂಡು ಕಂಚಿನ ಕಂಬಕ್ಕೆ ಸರಪಳಿಯಿಂದ ಕಟ್ಟಿದರು. 'ಆಗ ಪಾಪನಾಯಕ ನಾಗಮುರಿಬೆತ್ತವನ್ನು ಹಿಡಿದು ಸೂರ್ಯದೇವನನ್ನು ನೆನೆದನು. ಸ್ವಾಮಿ ಸಾಧುಸಜ್ಜನರ ಜೀವಸಮಾಧಿಯಾಗುತ್ತಲಿವೆ, ದುಷ್ಟ ಶಿಕ್ಷಣ ರಕ್ಷಣಾರ್ಥವಾಗಿ ನಿನ್ನ ಉರಿಗಣ್ಣು ಹರಿಗೈಯ್ಯ? ನನಗಿಂತು ಈ ಉನ್ಮತ್ತರನ್ನು ದಂಡಿಸಲು ನನಗೆ ಆಶೀರ್ವದಿಸು' ಎಂದು ಧ್ಯಾನಿಸಿದಾಗ ಸರಪಳಿ ಕಳಚಿಕೊಂಡವು. ಜಗಪತಿರಾಯನಿಗೆ ಭಯಭೀತಿಯಿಂದ ನೀನು ಯಾರು? ಏಕೆ ಇಲ್ಲಿಗೆ ಬಂದೆ? ಎಂದು ವಿಚಾರಿಸಿದಾಗ, ನಿನ್ನ ಸಿಡಿಲು ಮಿಂಚಿನ ಕಠಾರಿಯನ್ನು ಕೊಟ್ಟರೆ ನಾನು ಹಿಂತಿರುಗುತ್ತೇನೆ. ನನ್ನ ಹೆಸರು 'ಪರದೇಶಿ ಪಾಪಯ್ಯ' ಎಂದಾಗ ರಾಜನು ಮೊದಲು ಇವನ ವಿಷಯ ತಿಳಿದಿದ್ದ. ಇವನನ್ನು ಹೀಗೆ ಬಿಟ್ಟರೆ ನನ್ನ ನಾಶ ಖಂಡಿತ ಎಂದು ತಿಳಿದ 'ಮೊಸರನ್ನದಲ್ಲಿ ವಿಷ ಬೆರೆಸಿ' ತಮ್ಮ ಭಂಟನಿಂದ ಕೊಡಿಸಿದನು. ಪಾಪನಾಯಕ ಪ್ರಸಾದವೆಂದು ತಿಂದನು. ಇದರಿಂದ ಅವನಿಗೆ ಏನೂ ಆಗಲಿಲ್ಲ. ಕೊನೆಗೆ ಭಂಟನು ತಾನು ಮಾಡಿದ ಹೇಯಕೃತ್ಯಕ್ಕೆ ಕ್ಷಮೆಯಾಚಿಸಿದನು. ಪಾಪನಾಯಕ ಅವನನ್ನು ಕ್ಷಮಿಸಿದ. ಇವನ ದೈವಶಕ್ತಿಯನ್ನು ಕಂಡ ಜಗಪತಿರಾಯರು ಹೆದರಿ ಸಿಡಿಲು ಮಿಂಚು ಕಠಾರಿಯನ್ನು ಇವನಿಗೆ ಒಪ್ಪಿಸಿದ.

ಪಾಪನಾಯಕನು ಸಿಡಿಲು ಮಿಂಚು ಕಠಾರಿಯನ್ನು ಪಡೆದು ಗೋಗುದ್ದಿನ ಕಡೆ ಧಾವಿಸಿದ. ಗೋಗುದ್ದಿನ ಹತ್ತಿರ(ಉದ್ಗಟ್ಟ), ಅದು ಈಗ ಸಲಗಟ್ಟು ಎಂಬ ಹೆಸರನ್ನು ಪಡೆದಿದೆ. ಅಲ್ಲಿ ಸಾಲಿಗ್ರಾಮಗಳನ್ನು ಸ್ಥಾಪಿಸಿ, ಆ ಜನರಿಗೆ ದೈವಿಪುರುಷನಾದನು. ಗೋಗುದ್ದಿನ ಗೊಲ್ಲರ ಹೆಣ್ಣು ಮಗಳು, ಪ್ರತಿನಿತ್ಯ ಹಾಲು ಮೊಸರನ್ನು ಜಗಪತಿರಾಯನ ಮುನ್ನೂರು ಜನ ಜಟ್ಟಿಗಳಿಗೆ ಕೊಟ್ಟು ಬರುತ್ತಿದ್ದಳು. ಈ ವಿಷಯ ಪಾಪನಾಯಕನಿಗೆ ತಿಳಿಯಿತು. ಸೂರ್ಯ ಮುಳುಗುವುದ ರೊಳಗಾಗಿ ಈ ಮುನ್ನೂರು ಜನ ಜಟ್ಟಿಗಳ ಕುತ್ತಿಗೆಯನ್ನು ಕೊಯ್ಯಬೇಕು, ಜನರನ್ನು ಇವರಿಂದ ಕಾಪಾಡ ಬೇಕೆಂದು ಶಪಥ ಮಾಡಿ, ಏಳು ಜನ ಭಂಟರೊಡನೆ, ಜಟ್ಟಿಗಳಿದ್ದ ನೆಲಮಾಳಿಗೆಯನ್ನು ಹೊಕ್ಕು ತನ್ನ ಚಂದ್ರಾದ್ಯದಿಂದ ಇನ್ನೂರ ಮೂವತ್ತು ಜನ ಜಟ್ಟಿಗಳ ತಲೆಯನ್ನು ಕೊಯ್ದನು. ಇನ್ನೂ ಎಪ್ಪತ್ತು ಜನ ಜಟ್ಟಿಗಳು, ಜಗಪತಿರಾಯನ ಮೊರೆಹೊಕ್ಕರು. ಈ ಜಟ್ಟಿಗಳನ್ನು ಹುಡುಕುತ್ತ ಹೊರಟ 'ಈ ಸಮಯದಲ್ಲಿ ಗೋಗುದ್ದಿನ ನೆಲಮಾಳಿಗೆಯಲ್ಲಿ, ತನ್ನ ನಾಗಮುರಿ ಬೆತ್ತವನ್ನು ಬಿಟ್ಟು ಹೋಗಿದ್ದನು.'

ಜಗಪತಿರಾಜ, ನಾವು ಪಾಪನಾಯಕನಿಂದ ನಾಶವಾಗುವುದು ಖಂಡಿತ ಎಂದು ಅವನನ್ನು ಸಂಹರಿಸುವುದಕ್ಕೆ ಬಂಟರನ್ನು ನೇಮಿಸಿದನು. ನಗರದ ಮೂರುಕೋಟೆ ಬಾಗಿಲುಗಳನ್ನು ಮುಚ್ಚಿದನು. ಹಾಗೂ ಕೋಟೆಯ ಹೊರಬಾಗದ ಕಂದಕದಲ್ಲಿ ಸುತ್ತಲೂ ಚೂಪಾದ ಕತ್ತಿಗಳನ್ನು ನೆಡೆಸಿದನು. ಪೂರ್ವದಿಕ್ಕಿನ ಕೋಟೆ ಬಾಗಿಲಲ್ಲಿ ತಳವಾರನೊಬ್ಬನನ್ನು ಕಾವಲಿಟ್ಟು ಪಾಪನಾಯಕ ಬಂದ ಕೂಡಲೇ ತಕ್ಷಣ ಕೋಟೆಯ ಬಾಗಿಲನ್ನು ಮುಚ್ಚುವಂತೆ ಆಜ್ಞೆ ಮಾಡಿದನು.

ಪಾಪನಾಯಕನು ಜಟ್ಟಿಗಳನ್ನು ಹುಡುಕುತ್ತಾ ಕೋಟೆಯನ್ನು ಪ್ರವೇಶಿಸಿದನು. ಇಡೀ ಜಗಪತಿರಾಯನ ದಂಡುದಳ ಪಾಪನಾಯಕನ ಮೇಲೆ ಬಿದ್ದಿತು. ಪಾಪನಾಯಕನಿಗೆ ಆವೇಶ ಉಕ್ಕಿ ಶ್ರೀಮನ್ನಾರಾಯಣನನ್ನು ನೆನೆದು ಕಾಳಗಕ್ಕೆ ನಿಂತನು. ತನ್ನ ಬಳಿ ಇದ್ದ ಸಿಡಿಲು ಮಿಂಚಿನ ಕಠಾರಿಯಿಂದ ದಂಡುದಳಗಳ ರುಂಡವನ್ನು ಚೆಂಡಾಡಿದನು. ಅವನ ಹೊಡೆತಕ್ಕೆ ಅನೇಕ ಜನರು ಸತ್ತರು. ಅನೇಕ ಜನರು ಪಲಾಯನವಾದರು. ನಾಯಕನು, ಬೆಚ್ಚದೆ, ಬೆದರದೆ ದಂಡುದಳವನ್ನು ಧ್ವಂಸಮಾಡಿ ಕೋಟೆಯ ಮೇಲಕ್ಕೆ ನೆಗೆದು ನಿಂತು ವೈರಿಯನ್ನು ಕೊಲ್ಲುವುದಕ್ಕೆ ಹುಡುಕುತ್ತಿದ್ದನು.

ತನ್ನ ವೈರಿಗಳನ್ನು ಹುಡುಕಲು, ಕೋಟೆಯ ಕೆಳಗೆ ನೆಲವೆಂದು ಭಾವಿಸಿ ಹಾರಿದನು. ಜಗಪತಿರಾಯ ಮೊದಲೇ ಏರ್ಪಡಿಸಿದ್ದ ಕಂದಕದಲ್ಲಿ ಕತ್ತಿಗಳ ಮೇಲೆ ಬಿದ್ದಾಗ ಮೊಳಕಾಲುಗಳು ನೆಟ್ಟಿದ್ದ ಕತ್ತಿಗಳಿಗೆ ತಾಗಿದಾಗ ಎದ್ದು ಓಡಲು ನಿತ್ರಾಣವಾಯಿತು. ಆದರೂ ಶಕ್ತಿ ಮೀರಿ ಕಂದಕದಿಂದ ಮೇಲೆ ಬಂದನು. ಇವನು ಜಗತ್ತನ್ನೇ ನಾಶಮಾಡಿಯಾನು ಎಂದು ವಿಷ್ಣು ಪ್ರತ್ಯಕ್ಷನಾಗಿ, ಸ್ತ್ರೀರೂಪ ಧರಿಸಿ, ಕುದುರೆ ಏರಿ ಬಂದು ಮರೆಮಾಚಿ ಬಾಣದಿಂದ ಅದೇ ಕಾಲುಗಳಿಗೆ ಹೊಡೆದನು. ಪಾಪನಾಯಕ ಹಿಂತಿರುಗಿ ನೋಡಿದಾಗ ಹೆಣ್ಣನ್ನು ಶಿಕ್ಷಿಸುವುದು ತರವಲ್ಲವೆಂದು ಪರಮೇಶ್ವರನನ್ನು ನೆನೆದ. ಆಗ ಪರಮೇಶ್ವರನು

ಪ್ರತ್ಯಕ್ಷನಾದ. 'ಸ್ವಾಮಿ ಈ ಪ್ರಪಂಚ ಇನ್ನು ನನಗೆ ಸಾಕು ನನಗೆ ಮೋಕ್ಷವನ್ನು ಕರುಣಿಸು' ಎಂದು ಬೇಡಿಕೊಂಡಾಗ, ಪರಮೇಶ್ವರನು 'ಪಾಪಯ್ಯ ನಿನ್ನ ಆಯುಷ್ಯವು ಇನ್ನೂ ಮುಗಿದಿಲ್ಲ, ಹೋಗಿರುವ ಎರಡು ಕಾಲುಗಳನ್ನು ಕರುಣಿಸುವೆ, ತಿರುಗಿ ನಿನ್ನಿಂದ ಲೋಕ ಕಲ್ಯಾಣವಾಗಲಿ' ಎಂದು ಆಶೀರ್ವದಿಸಿದನು. ಪಾಪನಾಯಕ ಕೇಳಲಿಲ್ಲ ಪರಮೇಶ್ವರನ ಆಜ್ಞೆಯಂತೆ ಭೂದೇವಿಯು ಇಬ್ಭಾಗವಾಯಿತು. ನಾಯಕನು, ಆ ಬಿರುಕಿನಲ್ಲಿ ಇಳಿದು ಭೂತಾಯಿಯ ಗರ್ಭದಲ್ಲಿ ಐಕ್ಯನಾದನು. ಆಗ ಪರಮೇಶ್ವರನು, ಪಾಪಯ್ಯ ನೀನು ಓಡಾಡಿದ ಸ್ಥಳಗಳಲ್ಲಿ ಮುಂದೆ ಪರಮ ಪವಿತ್ರ ಸ್ಥಳಗಳಾಗಲಿ, ನೀನು ನಿಂತ ಸ್ಥಳವು ನಿನ್ನ ಬುಡಕಟ್ಟಿನವರಿಗೆ ಪವಿತ್ರ ಕ್ಷೇತ್ರವಾಗಲಿ, ನಿನ್ನ ನಾಮಾಂಕಿತ ಭೂಮಿಯ ಮೇಲೆ ಸೂರ್ಯ ಚಂದ್ರರು ಇರುವ ತನಕ ಬೆಳಗಲಿ ಎಂದು ಹರಸಿದರು. ಅಂತೆಯೇ, ಜಗಳೂರಿನಲ್ಲಿ ಪಾಪಿದೇವರು, ಚಳ್ಳಕೆರೆಯಲ್ಲಿ ಜಗಳೂರಜ್ಜ, ಕಂಪಳ ದೇವರಹಟ್ಟಿಯಲ್ಲಿ ಸೂರ್ಯದೆನ್ನ ಪಾಪನಾಯಕನೆಂದು ಹೆಸರು ಪಡೆದನು.

**ಜಗಳೂರಜ್ಜನ ಹಬ್ಬ, ಜಾತ್ರೆಗಳು**

೧. ಚಳ್ಳಕೆರೆಯಲ್ಲಿ ಪಾಪನಾಯಕನ ಹಬ್ಬ ಜಾತ್ರೆಗಳು

೨. ಕಂಪಳ ದೇವರ ಹಟ್ಟಿಯಲ್ಲಿ ಪಾಪನಾಯಕನ

೩. ಜಗಳೂರಿನಲ್ಲಿ ಪಾಪನಾಯಕನ ಹಬ್ಬ, ಜಾತ್ರೆಗಳು

**೧. ಚಳ್ಳಕೆರೆಯ ಪಾಪನಾಯಕನ ಹಬ್ಬ ಜಾತ್ರೆಗಳು**

ತಲೆತಲಾಂತರಗಳಿಂದ ಸಮುದಾಯದ ಅಂಗೀಕಾರವನ್ನು ಪಡೆದುಕೊಂಡು ಬಳಕೆಯಲ್ಲಿರುವ ಧಾರ್ಮಿಕ ವಿಧಿವಿಧಾನಗಳೇ ಆಚರಣೆಗಳಾಗಿವೆ. ಈ ಆಚರಣೆಗಳು ಹೆಚ್ಚಾಗಿ ದೈವಕ್ಕೆ ಸಂಬಂಧಿಸಿದವುಗಳೇ ಹೆಚ್ಚಾಗಿರುವುದನ್ನು ಗಮನಿಸಬಹುದು.

ಮಾನವನ ಮನಸ್ಸು ಪಕ್ವಗೊಂಡ ಮೇಲೆ ಧಾರ್ಮಿಕ ಭಾವನೆಗಳು ರೂಪಗೊಂಡವೆಂದು ಹೇಳಬಹುದು. ಆರಂಭದಲ್ಲಿ ಮಾನವ ಪ್ರಕೃತಿಯ ಅಗೋಚರ ಶಕ್ತಿಯನ್ನು ಆರಾಧಿಸುತ್ತಾ ಬಂದ. ಕಲ್ಲು ಮರಗಳಲ್ಲಿ ದೈವದ ಅಂಶವನ್ನು ಕಂಡುಕೊಂಡು ಅಂದಿನಿಂದ ಇಂದಿನವರೆಗೂ ಮನುಷ್ಯ ತಿಳಿದೋ ತಿಳಿಯದೋ ಹಲವಾರು ಆಚರಣೆಗಳನ್ನು ಮಾಡುತ್ತಾ ಬಂದಿದ್ದಾನೆ. ಇಂತಹ ಆಚರಣೆಗಳು ವ್ಯಕ್ತಿಗತವಾಗಿರುತ್ತದೆ. ಸಮಾಜದ ಹಿತರಕ್ಷಣೆಯೇ ಇವುಗಳ ಬಹು ಮುಖ್ಯ ಉದ್ದೇಶ. ಈ ಆಚರಣೆಗಳ ಮೂಲಕ ಬದುಕಿನಿಂದ ಸ್ವಲ್ಪ ವಿರಾಮ ಪಡೆದು ಒಂದು ದಿನವಾದರೂ ಸಂತೋಷದಿಂದ ಜೀವನ ನಡೆಸಬೇಕೆನ್ನುದೆ ಆಶಯ.

ಮಾನವ ತನ್ನ ಬೆಳವಣಿಗೆಯ ಆರಂಭದ ದಿನಗಳಲ್ಲಿ ನಡೆಸುತ್ತಿದ್ದ ಆಚರಣೆ ಪದ್ಧತಿಗಳಲ್ಲಿ

ಧಾರ್ಮಿಕ ಭಾವನೆಯೇ ಪ್ರೇರಕವಾದ ಹಿನ್ನೆಲೆಯಾಗಿದೆ. ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆಗಳಲ್ಲಿ ಇಂತಹ ಧಾರ್ಮಿಕ ಭಾವನೆಗಳನ್ನು ಕಾಣುತ್ತೇವೆ.

ಮ್ಯಾಸಬೇಡರು ಹೆಚ್ಚಾಗಿ ಕೃಷಿಯನ್ನು ಅವಲಂಭಿಸಿ ಜೀವನ ನಡೆಸುತ್ತಿರುವುದು ಕಂಡು ಬರುತ್ತದೆ. ಜಗಳೂರಜ್ಜನ ಒಕ್ಕಲುತನದವರು ಮೊದಲು ಬೇಸಾಯವನ್ನು ಆರಂಭಿಸುವಾಗ ಜಗಳೂರು ಪಾಪನಾಯಕನನ್ನು ನೆನೆದು ಕೈಮುಗಿದು ಕಾಯಿಯನ್ನು ಒಡೆಸುವ ಪದ್ಧತಿ ಇದೆ. ಹೀಗೆ ಮಾಡುವುದರಿಂದ ಬೆಳೆಯು ಹುಲುಸಾಗಿ ಬರುವುದೆಂಬ ನಂಬಿಕೆ ಇದೆ.

ಮ್ಯಾಸಬೇಡರು ಶ್ರಾವಣ ಮಾಸದಲ್ಲಿ ನಾಗರಾಧನೆ, ದೀಪಾವಳಿಯಲ್ಲಿ ದೀಪೋತ್ಸವ ಹಾಗೂ ಫೆಬ್ರವರಿಯಲ್ಲಿ ಗುಗ್ಗರಿಹಬ್ಬವನ್ನು ಆಚರಿಸುತ್ತಾರೆ. ಕೃಷಿ ಎಂದಾಗ ಮುಖ್ಯವಾಗಿ ಮಧ್ಯ ಕರ್ನಾಟಕದಲ್ಲಿ ರಾಗಿ, ಜೋಳ, ನವಣೆ, ಶೇಂಗಾ ಹುರಳಿ ಇವು ಪ್ರಮುಖ ಬೆಳೆಗಳು. ಹುರಳಿಯನ್ನು ದನ ಕರುಗಳಿಗೆ ಪೌಷ್ಠಿಕ ಆಹಾರವಾಗಿ ತಿನ್ನಿಸುವ ಅಭ್ಯಾಸವೂ ಇದೆ. ಮ್ಯಾಸಬೇಡರು ಬೆಳೆದಂತಹ ಬೆಳೆಗಳನ್ನು ಅದರಲ್ಲಿ ವಿಶೇಷವಾಗಿ ಹುರಳಿಯನ್ನು ದೇವರಿಗೆ ಅರ್ಪಿಸುವವರೆಗೂ ಅದನ್ನು ಬಳಸುವುದಿಲ್ಲ.

**ಜಗಳೂರಜ್ಜನ ಆಚರಣೆಗಳು**

ಕಂಪಳ ದೇವರ ಹಟ್ಟಿಯಲ್ಲಿ ಹಾಗೂ ಜಗಳೂರಿನಲ್ಲಿ ನಡೆಯುವ ಆಚರಣೆಗಳಿಗಿಂತ ಭಿನ್ನವಾಗಿರುವುದನ್ನು ಇಲ್ಲಿ ನೋಡಬಹುದು. ಆಚರಣೆಗಳನ್ನು ನೋಡುವುದಕ್ಕಿಂತ ಮುಂಚೆ ಇಲ್ಲಿಯ ಜಾತ್ರೆ ಹೇಗಿರುತ್ತದೆಂಬುದನ್ನು ತಿಳಿಯಬೇಕಾಗಿದೆ. ಜಾತ್ರೆ ಎಂಬುದು ರೂಢಿ, ಸಂಪ್ರದಾಯಗಳ ಒಂದು ಅಂಗ. ಶಂಕರ ಸೀನಾ ಗುಪ್ತಾ ಬಂಗಾಳದ ಜಾನಪದ ಬಗ್ಗೆ ಬರೆದ ಪ್ರಸ್ತಾವನೆಯಲ್ಲಿ ಜಾತ್ರೆಯನ್ನು ಜಾನಪದ ವಿಷಯ ಪಟ್ಟಿಯಲ್ಲಿ ಸೇರಿಸಿದ್ದು ಸಹಜ. ಭಾರತದಲ್ಲಿ ಜಾತ್ರೆ ಬಹು ಪರಿಚಿತವಾದ ಬಹಳ ಆಕರ್ಷಕವಾದ ವಿಷಯ. ಅದು ಎಲ್ಲಾ ಕಡೆಗೂ ಕಂಡು ಬರುವುದು ಮತ್ತು ಎಲ್ಲರನ್ನು ರಂಜಿಸುತ್ತದೆ.[೧]

ಜಾತ್ರೆಯ ಪರಿಕಲ್ಪನೆ ಕುರಿತು ನಿಘಂಟುಗಳು ಹೇಳುವಂತೆ ಜಾತ್ರೆ ಎಂಬ ಪದ 'ಯಾತ್ರೆ' ಯ ತದ್ಭವ ರೂಪ. ಜಗಳೂರಜ್ಜನ ಜಾತ್ರೆಗೆ ಬರುವವರು ಸಾಮಾನ್ಯವಾಗಿ ಕಾಲ್ನಡಿಗೆ ಅಥವಾ ಬಂಡಿಯನ್ನು ಕಟ್ಟಿಕೊಂಡು ಬರುವುದನ್ನು ಇಂದಿಗೂ ಸಹ ಚಳ್ಳಕೆರೆಯ ಹಾಗೂ ಕಂಪಳರಂಗ ದೇವರಹಟ್ಟಿಯಲ್ಲಿ ಗಾಡಿಗಳನ್ನು ಕಟ್ಟಿಕೊಂಡು ಬರುವುದನ್ನು ಕಾಣಬಹುದಾಗಿದೆ. ಎಲ್ಲಾ ಸಮುದಾಯದವರು ದೇವರನ್ನು ನೋಡಲು ಹರುಷದಿಂದ ಬರುತ್ತಾರೆ. ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಗಾಡಿಗಳ ಸಂಖ್ಯೆ ಕಡಿಮೆಯಾಗಿವೆ.

ಜಗಳೂರಜ್ಜನ ಪೂಜಾರಿಗಳು ಅಜ್ಜ ಪರಮೇಶ್ವರನ ಬೆಡಗಿನವರು. ಈಗಿನ ಪೂಜಾರಿಯ ಹೆಸರು ಪಾಪಯ್ಯ. ಪಾಪನಾಯಕ ಬಾಲಕನಾಗಿದ್ದಾಗ ಏಳು ಹೆಡೆ ಸರ್ಪದ ದರ್ಶನವಿತ್ತ ಸ್ಥಳದಲ್ಲಿಯೇ ಪಾಪನಾಯಕನ ದೇವಸ್ಥಾನ ನಿರ್ಮಾಣವಾಗಿದೆ. ಅಂದಿನ ಹುತ್ತ ಇಂದಿಗೂ ಇದೆ. ಅದನ್ನೇ

ಪಾಪನಾಯಕನ ಸಂಕೇತವಾಗಿ ಬಳಸಿಕೊಂಡು ಅನೇಕ ಆಚರಣೆಗಳನ್ನು ಮಾಡುತ್ತಾರೆ. ಈ ಸಾಂಸ್ಕೃತಿಕ ಕೇಂದ್ರದಲ್ಲಿ ಪ್ರತಿ ಸೋಮವಾರವು ಪೂಜೆ ನಡೆಯುತ್ತದೆ. ಶ್ರಾವಣ ಮಾಸದಲ್ಲಿಯು ವಿಶೇಷ ಪೂಜೆ ನಡೆಯುತ್ತದೆ. ಈ ವೇಳೆಯಲ್ಲಿ ಭಕ್ತರ ಸಂಖ್ಯೆ ಹೆಚ್ಚಾಗಿರುತ್ತದೆ.

ಪಾಪನಾಯಕ ದೇವರನ್ನು ವಿಶೇಷವಾಗಿ ಪಾಲಿಕೆಯ ಮೂಲಕ ಮಾಡಿ ದಸರಾ ಸಂದರ್ಭದಲ್ಲಿ ಮೆರವಣಿಗೆಯಲ್ಲಿ ಪೂಜಾರಹಟ್ಟಿಗೆ ಕರೆತಂದು ಬನ್ನಿ ಮುಡಿಸುತ್ತಾರೆ. ನಾಲ್ಕು ಜನ ಪಾಲಿಕೆಯನ್ನು ಕೊಂಡೊಯ್ಯುತ್ತಾರೆ. ಈ ಪಾಲಿಕೆಯನ್ನು ಯಾವ ಜನಾಂಗದವರು ಬೇಕಾದರೂ ಹೊತ್ತುಕೊಂಡು ಹೋಗಬಹುದು. ಪೂಜಾರ ಹಟ್ಟಿಯಿಂದ ಪೂಜೆ ಮುಗಿಸಿಕೊಂಡು ಗೊರ್ಲಕಟ್ಟೆಗೆ ಬರುತ್ತಾರೆ. ಅಲ್ಲಿ ಪೂಜೆ ಮುಗಿಸಿಕೊಂಡು ಇಲ್ಲಿ ಅಂಬು ಮಾಡುತ್ತಾರೆ. ಅಂಬು ಮಾಡುವವರು ಓಬನಾಯಕನ ವಂಶಸ್ಥರು

## ಗುಗ್ಗರಿ ಹಬ್ಬ

ಗುಗ್ಗರಿ ಹಬ್ಬದಲ್ಲಿ ವೇದಾವತಿ ನದಿಯಲ್ಲಿ ಗಂಗೆ ಪೂಜೆಯನ್ನು ಮುಗಿಸಿಕೊಂಡು ಮ್ಯಾಸಬೇಡರ ೧೨ ದೇವರುಗಳು ಬಂದು ಸೇರುತ್ತವೆ. ಅಂದು ವಿಶೇಷ ಪೂಜೆ ನಡೆಯುತ್ತದೆ. ಈ ವೇಳೆಯಲ್ಲಿ ನಡೆಯುವ ಆಚರಣೆಗಳು ತಮ್ಮ ತಮ್ಮ ಕೋಮಿನವರು ಇಲ್ಲಿ ತಮ್ಮ ನೇಮ, ನಿತ್ಯಗಳನ್ನು ಮಾಡುತ್ತಾರೆ. ನಂತರ ಮೂರು ಜನ ನಾಯಕರನ್ನು ಇಲ್ಲಿ ನೇಮಿಸುತ್ತಾರೆ

### ಮೂರು ಜನ ನಾಯಕರ ನೇಮಕ

ಈ ಸಂಸ್ಕೃತಿಯ ಅಭಿವೃದ್ಧಿ, ಜಾತಿ ಕಲಹ, ನ್ಯಾಯ ತೀರ್ಮಾನಕ್ಕಾಗಿ ಈ ಜನಾಂಗದ ಹಿರಿಯರನ್ನು ಜಾತಿ ಸಂವಿದಾನದಡಿಯಲ್ಲಿ ನಾಯಕನೆಂದು ನೇಮಿಸುತ್ತಾರೆ.

೧. ಗಟ್ಟಿ ಮುತ್ತಿನಾಯಕ

೨. ಮೀಸಲು ನಾಯಕ

೩. ಬೋಸೇ ನಾಯಕ

### ಮೂರು ಜನ ಪೂಜಾರಿಗಳು

೧. ಕಾಮಗತಿ

೨. ನಲ್ಲಗೇತಿ

೩. ಉರಿಪೋತಿ ಬುಲ್ಲುಡುಲು

### ಮೂರು ಜನ ದಾಸಯ್ಯಗಳು

೧. ಮುಂಡಾಸುದಾಸ

೨. ಗೊಡಗುದಾಸ

೩. ಬೋಡಿದಾಸ

**ಗೋತ್ರಗಳು ಎರಡು**

| | | |
|---|---|---|
| ಮಲ್ಲನಾಯಕ | ೩. ಮಂದಿ ಹಿರಿಯರು | ಮಂದಲ |
| ಬೋಡಿದಾಸನು | ಕಾಟಬ್ಬನವನು | ಗಜ್ಜಗನವನು |
| ಸಜ್ಜಲವಾನು | ಯರಗೊಂಡ್ಲವನು | ಬಿದ್ದಿನವನು |
| ಯರಗೋಡ್ಲವನು | ನಳಬಾಳಸಿವಾಡು | ಬುಡ್ಡುಬೋರುವವಾಡು |
| ನಲ್ಲಬಾಳಸಿವಾನು | ಗಡಗಿಲೋಡು | ಕಗ್ಗಲ್ಲವಾಡು |
| ನಲ್ಲಕ್ಕಿಯವನು | ವರಗನೋಡು | ಮಲ್ಲೂರುವಾಡು |
| ವರನವನು | ಚಿನ್ನಮುತ್ತಿವಾಡು | ಯರಬೊಮ್ಮನಾಡು |
| ಚಿನ್ನಮುತ್ತಿಗನು | ಜೂಗನೋಡು | ಪರಮೇಶಿನವಾಡು |

ಇವರ ಪಾತ್ರ ಸಮುದಾಯದಲ್ಲಿ ಬಹಳ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಕಂಪಳದೇವರ ಹಟ್ಟಿಯ ಪಾಪೇದೇವರು ಮೂರು ವರ್ಷಗಳ ಹಿಂದೆ ಅಂದರೆ ೨೦೦೬ರಲ್ಲಿ ಬಂದಿತ್ತು. ಅಜ್ಜನ ಗುಡಿಯಲ್ಲಿ ಪೂಜೆಯನ್ನು ಮುಗಿಸಿಕೊಂಡು ಹಿಂದೆ ನಡೆಸಿಕೊಂಡು ಬಂದ ಆಚರಣೆಗಳನ್ನು ಪ್ರಸ್ತುತ ದಿನಗಳಲ್ಲಿಯು ಮುಂದುವರೆಸಿಕೊಂಡು ಹೋಗುವುದು ಒಂದು ವಿಶೇಷವಾಗಿದೆ. ಕಾಡ್ಲಕುಂಟೆ ದಿಬ್ಬ ಜಗಳೂರಜ್ಜನ ಜನನ ಕೇಂದ್ರ. ಈ ಕೇಂದ್ರಕ್ಕೆ ಮ್ಯಾಸ ಬೇಡರ ದೇವರುಗಳೆಲ್ಲವು ಬಂದು ಸೇರುತ್ತವೆ. ೨೦೦೬ ರಲ್ಲಿ ಜಗಳೂರಜ್ಜನು ಪೂಜಾರಿ ಮೈ ಮೇಲೆ ಬಂದು ಒಂದು ಸ್ಥಳವನ್ನು ತೋರಿಸುತ್ತಾನೆ. ಭಕ್ತರು ಸ್ವಲ್ಪ ಆಳಕ್ಕೆ ಮಣ್ಣನ್ನು ತೆಗೆಯುತ್ತಾರೆ. ಆ ಅಲ್ಲಿ ನೀರು ಕಾಣಿಸಿಕೊಳ್ಳುತ್ತದೆ. ಇದೊಂದು ರೀತಿಯಲ್ಲಿ ಪವಾಡವಾಗಿ ಕಂಡು ಬರುತ್ತದೆ. ಏಕೆಂದರೆ ಸುತ್ತಮುತ್ತಲಿನ ಪ್ರದೇಶದಲ್ಲಿ ಎಲ್ಲಿಯೂ ನೀರು ಇರುವುದು ಕಂಡು ಬರುವುದಿಲ್ಲ. ಆ ವೇಳೆಯಲ್ಲಿ ಪೂಜೆಯನ್ನು ಮಾಡುತ್ತಾರೆ. ಪೂಜೆಯಾದ ನಂತರ ನೀರೆಲ್ಲ ಮಾಯವಾಗುವುದು. ಇಲ್ಲಿಯ ವಿಶೇಷವಾಗಿರುತ್ತದೆ.

ಚಳ್ಳಕೆರೆ ಗುಡಸಲಮ್ಮ ಪ್ರತಿ ಶ್ರಾವಣಮಾಸಕ್ಕೆ ಒಂದು ಸಲ ಜಗಳೂರಜ್ಜನ ಸಾಂಸ್ಕೃತಿಕ ಕೇಂದ್ರದ ಬಳಿ ಬಂದು, ಗಂಗೆ ಪೂಜೆ ಮಾಡಿಕೊಂಡು ಹೋಗುತ್ತಾಳೆ. ಜಗಳೂರಜ್ಜ ೧೨ ಪಟ್ಟಿಗೆಯ ದೇವರುಗಳಿಗೆ ಸೇರಿದ್ದಾನೆ.

**ಜಗಳೂರಜ್ಜನಿಗೆ ಚಳ್ಳಕೆರೆಯಲ್ಲಿ ಭಕ್ತರು ಹೊತ್ತುಕೊಳ್ಳುವ ಹರಿಕೆಗಳು**

ತಮಗೆ ರಕ್ಷಣೆ ನೀಡುವ ದೇವರಿಗಾಗಿ ಭಕ್ತರು ಏನೆಲ್ಲಾಪರಿತ್ಯಾಗ ಮಾಡಲು ಸಿದ್ದರಾರುಗುತ್ತಾರೆ. ಆರೋಗ್ಯ ಮಳೆ, ಬೆಳೆ, ಮದುವೆ, ಮಕ್ಕಳು ಹೀಗೆ ಹತ್ತು ಹಲವಾರು ರೀತಿಯಲ್ಲಿ ಹರಕೆಗಳನ್ನು ಬೇಡಿಕೊಳ್ಳುತ್ತಾರೆ. ಹರಕೆ ಹೊತ್ತವರು ಈ ದೇವರಿಗೆ ಕಾಣಿಕೆಯ ರೂಪದಲ್ಲಿ ಅನೇಕ ವಸ್ತುಗಳನ್ನು ಕೊಡುತ್ತಾರೆ.

* ಗಂಡುಮಗುವಾದರೆ ಜಗಳೂರು ಪಾಪನಾಯಕನ ಹೆಸರು ಇಡುವುದಾಗಿ ಬೇಡಿಕೊಳ್ಳುವರು.

* ಮಕ್ಕಳಾದರೆ ಕಲ್ಯಾಣ ಮಂಟಪ ಕಟ್ಟಿಸುವುದಾಗಿ ಧನಸಹಾಯ ಮಾಡುವುದಾಗಿ ಮಗುವಿನ ತೂಕದಷ್ಟು ಬಾಳೆ ಹಣ್ಣುಕೊಡುವುದಾಗಿ ಮಗುವಿನ ತೂಕದಷ್ಟು ಬೆಲ್ಲವನ್ನು ಕೊಡುವುದಾಗಿ ಬೇಡಿಕೊಳ್ಳುತ್ತಾರೆ.

* ಬೆಳ್ಳಿ ಬಂಗಾರದ ವಸ್ತುಗಳನ್ನು ಜಗಳೂರಜ್ಜನಿಗೆ ನೀಡುವುದು.

* ಹಣವನ್ನು ಕೊಡುವುದು

ಬರಿಗಾಲಿನಲ್ಲಿ ನಡೆಯುತ್ತ ಒಂದು ಮೀಸಲು ಹಾಲು, ತುಪ್ಪ ಅರ್ಪಿಸುವರು. ಬರಿಗಾಲಿನಲ್ಲಿ ಕಾಸು, ಮೀಸಲು, ಮಡಿದುಂ(ಅಕ್ಕಿಹಿಟ್ಟು) ಹೊತ್ತು ತರುವುದು ಕಂಡು ಬರುತ್ತದೆ.

* ಸೋಮವಾರ ಒಪ್ಪತ್ತು ಉಪವಾಸವಿದ್ದು ಪೂಜೆ ಮಾಡಿಸುವುದು

* ದಾಸೋಹ ನಡೆಸುವುದು

* ಕುರಿಯನ್ನು ಬಲಿ ಕೊಡುವುದು

**ಜಗಳೂರಜ್ಜನ ಬಗ್ಗೆ ಇರುವ ನಂಬಿಕೆಗಳು**

ನಂಬಿಕೆಗಳು ಮಾನವನ ಜೀವನದಲ್ಲಿ ಅತೀ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಮನುಷ್ಯನ ಜೀವನ ನಡೆಯುವುದೇ ನಂಬಿಕೆಗಳಿಂದ. ಈ ನಂಬಿಕೆಗಳು ಹಲವಾರು ರೀತಿಯಲ್ಲಿ ಪೂರಕವೂ, ಸಹಾಯಕವೂ, ಆಗಿರುತ್ತವೆ. ಬುಡಕಟ್ಟು ನಂಬಿಕೆಯೇ ಪ್ರಧಾನ, ಹಾಗೂ ಸರ್ವಸ್ವ ಎಂದು ಸ್ವೀಕರಿಸಿದ್ದಾರೆ. ದೇವರ ಮೇಲಿನ ನಂಬಿಕೆಗಳಂತೂ ಇನ್ನೂ ಅರ್ಥವಂತಿಕೆಯನ್ನು ಪಡೆದುಕೊಂಡಿರುತ್ತವೆ.

ನಂಬಿಕೆಗಳು ಜನತಾ ಅಭಿವ್ಯಕ್ತಿ. ಜನತೆಯ ಪರಂಪರಾನುಗತ ಜ್ಞಾನಸುಧೆ, ಸುಸಂಸ್ಕೃತ ಹೃದಯದ ಪರಿಪಕ್ವ ಅನುಭವಸಾರವೆನ್ನಬಹುದು. ಭಕ್ತರು ಜಗಳೂರು ಪಾಪನಯಕನನ್ನು ಬಹಳ ನಿಷ್ಠೆಯಿಂದ ನಂಬುತ್ತಾರೆ. ಮತ್ತು ನಿತ್ಯವೂ ಪೂಜಿಸುತ್ತಾರೆ. ಈ ದೇವರನ್ನು ನಂಬಿದರೆ ನಮ್ಮ ಕಷ್ಟಗಳನ್ನು ಪರಿಹಾರ ಮಾಡುತ್ತಾನೆ. ಎಂದು ಮ್ಯಾಸನಾಯಕರು ನಂಬಿದ್ದಾರೆ.

ವೈಯಕ್ತಿಕವಾಗಿ ಕಷ್ಟ ಬಂದರೆ ಅಂಥ ಕಷ್ಟ ತೀರುವುದಕ್ಕಾಗಿ ದೈವಕ್ಕೆ ಹರಕೆ ಒಪ್ಪಿಸುತ್ತಾರೆ. ಜಗಳೂರಜ್ಜನಿಗೆ ಒಪ್ಪಿಸುವ ಹರಕೆಗಳು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ತೆಂಗಿನಕಾಯಿ ಒಡೆಸುವುದು

೨. ದೀಡ ನಮಸ್ಕಾರ ಹಾಕುವುದು

೩. ಉಪವಾಸ ಮಾಡುವುದು

೪. ದೈವಕ್ಕೆ ಮೀಸಲು ಹಾಕುವುದು

೫. ಹಣವನ್ನು ಕಾಣೀಕೆಯಾಗಿ ಹುಂಡಿಗೆ ಹಾಕುವುದು

೬. ದೇವರ ಹೆಸರಿನಲ್ಲಿ ದೀಪಗಳಿಗೆ ಎಣ್ಣೆ ಹಾಕಿ ದೀಪ ಹಚ್ಚುವುದು.

ಹೀಗೆ ನಾನಾ ರೀತಿಯ ನಂಬಿಕೆ ಮತ್ತು ಹರಕೆ ಕಟ್ಟಿಕೊಂಡು ಭಕ್ತರು ಭಯ ಭಕ್ತಿಯಿಂದ ನಡೆದು ಕೊಳ್ಳುತ್ತಾರೆ. ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ, ಕಷ್ಟವಾದರೂ ಸಹಿಸಿಕೊಳ್ಳುತ್ತಾರೆ. ಅನುಕೂಲಸ್ಥರ ಈ ದೇವರಿಗೆ ಖರ್ಚು ಮಾಡುವುದಕ್ಕೆ ಜಿಪುಣತನ ತೋರಿಸುವುದಿಲ್ಲ. ತಾವು ಹಸಿದಿದ್ದರೂ ಸಾಲ ಮಾಡಿಯಾದರೂ ದೇವರ ಸೇವೆ ಮಾಡುವವರನ್ನು ಇಲ್ಲಿ ಕಾಣಬಹುದಾಗಿದೆ.

**೨. ಕಂಪಳ ದೇವರ ಹಟ್ಟಿಯಲ್ಲಿ ಪಾಪನಾಯಕನ ಆಚರಣೆಗಳು**

ಕಂಪಳದೇವರ ಹಟ್ಟಿಯಲ್ಲಿ ವರ್ಷದಲ್ಲಿ ಎರಡು ಸಲ ಹಬ್ಬಗಳು ನಡೆಯುತ್ತವೆ. ಒಂದು ದೀಪಾವಳಿಯ ಸಂದರ್ಭದಲ್ಲಿ (ದೀಪೋತ್ಸವ) ದೂಲಿ ಹಬ್ಬ. ಮತ್ತು ಜನವರಿ ತಿಂಗಳ ಕೊನೆ ಇಲ್ಲವೇ ಫೆಭ್ರುವರಿ ತಿಂಗಳ ಮೊದಲು ಈ ಜಾತ್ರೆಯು ಜರಗುತ್ತದೆ. ಈ ಜಾತ್ರೆಯನ್ನು ಮ್ಯಾಸಬೇಡರು ಅತ್ಯಂತ ನಿಯಮ ನಿಷ್ಠೆಯಿಂದ ಆಚರಿಸುತ್ತಾರೆ.

ಈ ಜಾತ್ರೆಯಲ್ಲಿ ಏಳು ಜನ ಹಿರಿಯರು ಮೂರು ಜನ ಪೂಜಾರಿಗಳು ಮೂರು ಜನ ದಾಸಯ್ಯಗಳು, ಮೂರು ಜನ ನಾಯಕರುಗಳು (ಗಟ್ಟಿ ಮುತ್ತಿನಾಯಕ, ಬೋಸನಾಯಕ, ಮೀಸಲು ನಾಯಕ) ಗುರು ಪೂಜಾರಿಗಳು, ಎತ್ತಿನ ಕಿಲಾರಿಗಳು, ನೂರಾ ಒಂದು ಮಂಡಲ ನೂರ ಒಂದು ಮಲ್ಲಿನಾಯಕರ ಪಾತ್ರ ಬಹಳ ಮಹತ್ವಪೂರ್ಣವಾದುದು. ಇವರಿಗೆ ಪ್ರಮುಖವಾದ ಕೆಲಸ ಕಾರ್ಯಗಳು (ನೋಮು) ಈ ಜಾತ್ರೆಯಲ್ಲಿ ಮೀಸಲಿರುತ್ತವೆ. ಬೇರೆಯವರು ಈ ಕೆಲಸ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ.

ಜಾತ್ರೆಯ ಹಿಂದಿನ ದಿನ ಊರಾಚೆ ಬಯಲು ಪ್ರದೇಶದಲ್ಲಿ ತಾತ್ಕಾಲಿಕವಾದ ಗುಡಿಯನ್ನು ಗುಡಿಸಲಿನಿಂದ ನಿರ್ಮಿಸುತ್ತಾರೆ. ಮಾರನೇ ದಿನ ಪೆಟ್ಟಿಗೆ ದೇವರುಗಳು, ಬಿಲ್ಲುದೇವರುಗಳು ಇದಕ್ಕೆ

ಸಂಬಂಧಪಟ್ಟವರು ಮೆರವಣಿಗೆಯೊಂದಿಗೆ ಈ ಗುಡಿಸಲಿನ ಗುಡಿಗೆ ಬಂದು ಕುಳಿತುಕೊಳ್ಳುತ್ತವೆ. ಈ ಆಚರಣೆಗಾಗಿ ಆಗಮಿಸಿದ ಪೂಜಾರಿಗಳು ಹಾಗೂ ದೇವರುಗಳು ಪುನಃ ಹಿಂದುರಿಗಿ ಹೋಗುವವರೆಗೆ ಹೋಗುವುದಿಲ್ಲ.

ಉತ್ಸವದ ಆರಂಭದಲ್ಲಿ ಭಕ್ತಾದಿಗಳು ಜೆನ್ನಿಗೆ ಹಸುವಿನ ಮೀಸಲು, ಹಾಲು ತುಪ್ಪವನ್ನು ಹೊಸ ಮಣ್ಣಿನ ಮಡಿಕೆಯಲ್ಲಿ ಮತ್ತು ಆ ವರ್ಷ ಬೆಳೆದ ಹೊಸ ಧಾನ್ಯಗಳನ್ನು (ಹುರಳಿ, ಜೋಳ, ಅಕ್ಕಿ,) ಕರಿ ಕಂಬಳಿಯಲ್ಲಿ ಗಂಟು ಕಟ್ಟಿಕೊಂಡು ತಲೆ ಮೇಲೆ ಹೊತ್ತುಕೊಂಡು ಬರಿಗಾಲಲ್ಲಿ ನಡೆದು ಕೊಂಡು ಬಂದು ದೇವರಿಗೆ ಅರ್ಪಿಸುತ್ತಾರೆ. ಮ್ಯಾಸಮಂಡಲದ ಮೂರು ಮುತ್ತಯ್ಯಗಳು ಅಂದರೆ ದೇವರೆತ್ತುಗಳು ಆಗಮಿಸುತ್ತವೆ. ಇಲ್ಲಿ ಪ್ರಮಾಣಬದ್ದವಾಗಿ ಕಂಪಳ ದೇವರೆತ್ತುಗಳು ಹಾಗೂ ಪಾಪನಾಯಕನ ದೇವರೆತ್ತುಗಳು ಭಾಗವಹಿಸುತ್ತವೆ. ಕಿಲಾರಿಗಳು ದೇವಸ್ಥಾನದ ಬಳಿ ಗದ್ದುಗೆ ಹಾಕುತ್ತಾರೆ. ಅಲ್ಲಿಗೆ ಬಂದ ಭಕ್ತರು ತಮ್ಮ ಯೋಗ್ಯತಾನುಸಾರವಾದ ಹಣ ಮೀಸಲನ್ನು ಕೊಡುತ್ತಾರೆ. ಜೊತೆಗೆ ಎಲೆ ಅಡಿಕೆಯನ್ನು ಕೊಡುವುದು ಕಂಡು ಬರುತ್ತದೆ. ಪಾಪನಾಯಕನ ಪೂಜಾರಿಗಳು ಪಾಪನಾಯಕನನ್ನು ಕೋರಿ ಕಂಬಳಿಯಲ್ಲಿ ಸುತ್ತಿ ಬಗಲಲ್ಲಿ ಇಟ್ಟುಕೊಂಡು ಕಂಪಳರಂಗಸ್ವಾಮಿ ದೇವಸ್ಥಾನಕ್ಕೆ ಹೋಗಿ ಹಣ ಹಾಗೂ ಮೀಸಲನ್ನು ಕೊಟ್ಟು ಬರುತ್ತಾರೆ. ಹಾಲು ತುಪ್ಪದಲ್ಲಿ ಪಾಪದೇವರನ್ನು ಚೆನ್ನಾಗಿ ತೊಳೆದು ಶೃಂಗರಿಸಿ ವಿಶೇಷವಾಗಿ ಪೂಜಿಸುತ್ತಾರೆ. ಪಾಪಯ್ಯ ದೇವರ ಗುಡಿಯ ಮುಂದೆ ಅಲುಗು ಹಾಕಿಕೊಳ್ಳುತ್ತಾರೆ. ಇದರ ಬಗ್ಗೆ ಒಂದು ಕಥೆ ಇದೆ. ಮಂದಲೋಕಸೂರ್ಯ ಮುಳುಗಿದ ತಮ್ಮ ದೇಹಗಳನ್ನು ಚಿಗಿದು ಅವುಗಳ ನೆಣದಿಂದ ಬೆಳಕನ್ನು ಮಾಡಿಕೊಂಡು ಸೂರ್ಯನ ಬಳಿ ಹೋಗಿ ಗೊಡಗು, ಧೂಪ, ಆರತಿ ಗಂಟೆ ಜಾಗಟೆಗಳನ್ನು ಪಡೆದುಕೊಂಡು ಬರುತ್ತಾನೆ. ಆ ಒಂದು ನೆನಪಿಗಾಗಿ ಉದ್ದವಾದ ಕತ್ತಿಯನ್ನು ಹಿಡಿದು ಎರಿಪೋತ್ಲ ಒಂದು ಕಾಲನ್ನು ನೆಲಕ್ಕೆ ತಾಗಿಸಿ ತನ್ನ ಹೊಟ್ಟೆ ಬಗೆದುಕೊಳ್ಳುವ ರೀತಿಯಲ್ಲಿ ಅಲಗನ್ನು ಆ ಹ್ಹಹ್ಹಾ ಓಹ್ಹೊ ಹ್ಹೊ ಎನ್ನುತ್ತಾ ಹಾಕಿಕೊಳ್ಳುತ್ತಾನೆ. ಅಲ್ಲಿ ನೆರೆದ ಮ್ಯಾಸ ಸಮೂಹ ಸೂರ್ಯನ ಉದಯದ ಕಡೆ ನೋಡಿ ಭೂಮಿ ತಾಯಿಗೆ ನಮಸ್ಕರಿಸುತ್ತದೆ. ಅಲಗು ಹಾಕಿಕೊಳ್ಳುವುದನ್ನು ಈ ಎರಡು ದೇವಸ್ಥಾನಗಳಲ್ಲಿ ಕಾಣುತ್ತೇವೆ.

ಕಂಪಳ ದೇವರಹಟ್ಟಿಯಲ್ಲಿ ದೀಪಾವಳಿಯ(ದೂಲಿಯ) ಸಂದರ್ಭದಲ್ಲಿ ಬೆಣ್ಣೆ ಪಡೆಯು ನಡೆಯುತ್ತದೆ. ಈ ಜಾತ್ರೆಯಲ್ಲಿ ಕರಿನೂರು ಒಂದು ಬೆಡಗು ಮಾತ್ರ ವಿಶಿಷ್ಟವಾಗಿದ್ದ ಪಾಪದೇವರ ಶೈಲಿಯಲ್ಲಿ ಮೀಸಲು ಕಾಸು ಕೊಡುವುದನ್ನು ಕಾಣುತ್ತೇವೆ. ಸಂಜೆ ವೇಳೆ ಬಂದವರು ರಾತ್ರಿಯೆಲ್ಲ ಜಾಗರಣೆ ಮಾಡುತ್ತಾರೆ.

### ಗುಗ್ಗರಿ ಹಬ್ಬ

ಮ್ಯಾಸ ಮಂಡಲಕ್ಕೆ ಸೇರಿದ ಎಲ್ಲರು ತಮ್ಮ ತಮ್ಮ ದೇವಸ್ಥಾನಗಳ ಬಳಿ ಹನ್ನೆರಡು ಪೆಟ್ಟಿಗೆ

ದೇವರುಗಳ ಹೆಸರಿನಲ್ಲಿ ನಡೆಸುವ ಹಬ್ಬವೇ ಗುಗ್ಗರಿ ಹಬ್ಬ ತಾವು ಬೆಳೆದ ಹುರುಳಿ, ಅಲಸಂದಿ, ದ್ವಿದಳ ಧಾನ್ಯಗಳನ್ನು ಕಂಪಳ ದೇವರ ಹಟ್ಟಿಯಲ್ಲಿ ಜಗಳೂರಜ್ಜನ ಪಾಳಿಯ ಒಳಗಡೆ ಇಡೀ ರಾತ್ರಿಯಲ್ಲಾ ಗುಗ್ಗರಿಯನ್ನು ಬೇಯಿಸುತ್ತಾರೆ. ಇನ್ನೊಂದು ಕಡೆ ಪಾಪಿದೇವರ ನೂರಾ ಒಂದು ಪೂಜೆ ನಡೆಯುತ್ತದೆ. ಬೆಳಿಗ್ಗೆ ಗುಗ್ಗರಿಯನ್ನು ಪ್ರಸಾದವೆಂದು ಭಕ್ತಾದಿಗಳು ಸ್ವೀಕರಿಸುತ್ತಾರೆ. ಇದನ್ನು ಗುಗ್ಗರಿ ಬಳಸುವ 'ಕಾಳು' (ಧಾನ್ಯ) ಕೇಂದ್ರಿತ ಹಬ್ಬ ಇದಾಗಿರುವುದರಿಂದ ಇದನ್ನು 'ಕಾಳಿಹಬ್ಬ' ಎಂದು ಕರೆಯುತ್ತಾರೆ.

ಈ ಹಬ್ಬದಲ್ಲಿ ಪಂಜು ನುಂಗುವವರು ಓಬಯ್ಯನಹಟ್ಟಿ ಚಳ್ಳಕೆರೆ ತಾಲೂಕಿನವರು ಇವರ ತಲೆ ಕೂದಲು ಭೂಮಿಗೆ ತಾಕುತ್ತವೆ. ಅಷ್ಟು ಉದ್ದವಾಗಿ ಕೂದಲನ್ನು ಇವರು ಬೆಳೆಸುತ್ತಾರೆ. ಮತ್ತು ಇವರು ಒಂದು ಚಲ್ಲಣ ಧರಿಸಿರುತ್ತಾರೆ. ಪಂಜು ನುಂಗುವಾಗ ಬರಿಮೈಯಲ್ಲಿ ಇರುತ್ತಾರೆ. ಆವೇಶಭರಿತರಾಗಿ ದೇವರ ಮುಂದೆ ಓಡಾಡುತ್ತಿರುತ್ತಾರೆ. ದೇವರ ಮುಂದೆ ದೀವಟಿಗೆಯಿಂದ ಪಂಜು ಹಚ್ಚಿಕೊಂಡು ಜನ ಸಮೂಹದತ್ತ ಓಡಿ, ಬರುತ್ತಿರುತ್ತಾರೆ. ಹೀಗೆ ಓಡುತ್ತಾ ಆವೇಶ ಭರಿತರಾಗಿ ಉರಿಯುವ ಪಂಜನ್ನು ಕೈಯಲ್ಲಿ ಹಿಡಿದು ಪಂಜನ್ನು ಬಾಡಿಗಿಟ್ಟುಕೊಳ್ಳಲು ಅದು ಬಾಯೊಳಗೆ ಕೆಟ್ಟು ಹೋಗುವುದು ಇದು ಕಂಪಳರಂಗಸ್ವಾಮಿ ಹಬ್ಬದಲ್ಲಿ ನಡೆಯುವ ಆಚರಣೆ.

**ಮೀಸಲು**

ಹಬ್ಬದಾಚರಣೆಯ ಹಿಂದಿನ ದಿನವೇ ತಮ್ಮ ತಮ್ಮ ಮನೆಗಳಿಗೆ ಸುಣ್ಣ ಬಣ್ಣ ಬಳಿದು ಮೀಸಲು ಹಿಡಿಯುತ್ತಾರೆ. ಸೂತಕದಲ್ಲಿರುವ ಮಹಿಳೆಯರು ಆ ದಿನ ಮನೆಯೊಳಗೆ ಇರುವಂತಿಲ್ಲ. ಸಾವಿನ ಸೂತಕದಲ್ಲಿರುವ ಮನೆಯಲ್ಲಿ ಮೀಸಲು ಹಾಕುವುದಿಲ್ಲ. ಸಾಕಿರುವ ಹಸು ಎಮ್ಮೆಗಳಿಂದ ಅದು ಮುಡಿಯಿಂದ ಹಾಲು ಕರೆದು ಅದನ್ನು ಕಾಯಿಸಿ ಹೆಪ್ಪಾಕಿ ದೇವಸ್ಥಾನಕ್ಕೆ ಬರಿಗಾಲಿನಲ್ಲಿ ನಡೆದುಕೊಂಡು ಮೀಸಲನ್ನು ದೇವಸ್ಥಾನಕ್ಕೆ ಒಪ್ಪಿಸುತ್ತಾರೆ. ಗುರುವಾರ ಸಾಯಂಕಾಲ ಭಕ್ತಾದಿಗಳೆಲ್ಲ ಕಾಲು ಮೀಸಲನ್ನು ತಂದು ಒಪ್ಪಿಸುತ್ತಾರೆ. ಈ ಆಚರಣೆ ದೀಪಾವಳಿ ಹಾಗೂ ಗುಗ್ಗರಿ ಹಬ್ಬದ ಸಂದರ್ಭದಲ್ಲಿ ಕಂಡು ಬರುತ್ತದೆ. ಮೀಸಲು ದೇವಸ್ಥಾನಕ್ಕೆ ಬಂದ ನಂತರವೇ ದೇವಾಲಯದಲ್ಲಿ ಆಚರಣೆಗಳು ಪ್ರಾರಂಭವಾಗುತ್ತವೆ. ಮೀಸಲು ಮೊಸರನ್ನು ಜೋಳದ ಅನ್ನದೊಂದಿಗೆ ಬೆರೆಸಿ ಶುಕ್ರವಾರ ಬೆಳಿಗ್ಗೆ ಐದು ಘಂಟೆಗೆ ನೈವೇದ್ಯ ಮಾಡುತ್ತಾರೆ. ಒಂದೊತ್ತಿನಿಂದ ಇದ್ದ ಭಕ್ತರು ಒಂದೊತ್ತು ಬಿಡುತ್ತಾರೆ. ಇವರು ಒಪ್ಪತ್ತು ಬಿಟ್ಟ ನಂತರವೇ ಉಳಿದ ಭಕ್ತಾದಿಗಳಿಗೆ ದಾಸೋಹ ನಡೆಯುತ್ತದೆ.

**ಕಾಸು**

ಹಬ್ಬದಾಚರಣೆಯಲ್ಲಿ ಪೂಜೆಯ ನಂತರ ಕರಿಕಂಬಳಿಯ ಗದ್ದುಗೆ ಹಾಸಿ ಅದರ ಮೇಲೆ ಪ್ರತಿ ಮನೆಗೆ ಒಬ್ಬರಂತೆ ಒಂದು ಕಾಸು ಎಂದು ನಾಣ್ಯಗಳನ್ನು ಹಾಗೂ ಎಲೆ ಅಡಿಕೆ ಸೇರಿಸಿ ಇಟ್ಟು

ನಮಸ್ಕರಿಸುತ್ತಾರೆ. ಈ ಹಣವನ್ನು ಪೂಜಾರಿ ತೆಗೆದುಕೊಳ್ಳುತ್ತಾನೆ ಹೀಗೆಯೇ ಎತ್ತಿನ ಗೂಡಿನ ಬಳಿ ದೇವರೆತ್ತುಗಳು ಬಂದಾಗಲೂ ಹೀಗೆಯೇ ಗದ್ದಿಗೆ ಹಾಕುತ್ತಾರೆ. ಭಕ್ತರು ಕಾಸು ಇಡುತ್ತಾರೆ. ಇದನ್ನು ಪಟ್ಟದ ಕಿಲಾರಿ ತೆಗೆದುಕೊಳ್ಳುತ್ತಾನೆ.

ಇಲ್ಲಿ ಎಲ್ಲ ದೇವರುಗಳ ಪೂಜೆ ಹಾಗೂ ಹುದಿಯ ಪೂಜೆಯ ಆಚರಣೆ ನಡೆಯುತ್ತದೆ. ಶುಕ್ರವಾರ ದಿನ ಹುಡೇಂನಿಂದ ಕುದುರೆ ಬಂದ ನಂತರ ದೇವರೆತ್ತುಗಳನ್ನು ಈ ಜಾತ್ರೆಯ ಗುಡಿಯಿಂದ ಇನ್ನೊಂದು ಗುಡಿಗೆ ಕೇಕೆ ಹಾಕುತ್ತಾ ಓಡಿಸುವುದು ಈ ಜಾತ್ರೆಯ ಇನ್ನೊಂದು ವೈಶಿಷ್ಟ್ಯ. ಒಟ್ಟಾರೆ ಕಂಪಗಳ ದೇವರ ಹಟ್ಟಿ ಪಾಪನಾಯಕ ಹಾಗೂ ಕಂಪಳರಂಗಸ್ವಾಮಿ ಜಾತ್ರೆ ಒಟ್ಟು ಒಂಭತ್ತು ದಿನಗಳ ಕಾಲ ನಡೆಯುತ್ತಿತ್ತು. ಅದು ಈಗ ನಾಲ್ಕು ದಿವಸ ಮಾತ್ರ ವಿಜ್ರಂಭಣೆಯಿಂದ ನಡೆಯುತ್ತಿದೆ. ಜಾತ್ರೆ ನಡೆಯುವ ಸಮಯದಲ್ಲಿ ದೇವರ ಮುಂದೆ ಬೆಂಕಿಯನ್ನು ಹಚ್ಚಿ ಬೆಳಕು ಮಾಡುತ್ತಾರೆ. ತಮ್ಮ ದೇವರು 'ಬೆಳಕಿಬೆಳಕಿನ ದೇವರು' ಎನ್ನುತ್ತಾರೆ. ಬೇರೆ ಯಾವುದೇ ರೀತಿಯ ಬೆಳಕು ಈ ದೇವರ ಮುಂದೆ ಬರಕೂಡದು. ಅದು ಇಲ್ಲಿ ನಿಷಿದ್ದ.

ಕಂಪಳ ದೇವರ ಹಟ್ಟಿಯಲ್ಲಿ ಜಗಳೂರಜ್ಜನ ಪೂಜಾರಿ ಇಂದು ಸಹ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಪೂಜಾರಿಯ ಮೊಣಕಾಲು ಮೇಲಕ್ಕಿರುವ ಒಂದು ಬಿಳಿಯ ಒರಟಾದ ಬಟ್ಟೆಯಿಂದ ಹೊಲಿದ ಚಲ್ಲಣ, ತಲೆಗೊಂದು ಬಿಳಿಯ ರವಿಕೆ ಅಥವಾ ಪೇಟ ಬರಿ ಮೈಗೆ ಹತ್ತು ಕಡಕುಗಳು ಕೆಲವೊಮ್ಮೆ ಹೆಗಲ ಮೇಲೆ ಮಡಚಿದ ಅಥವಾ ಹೊದ್ದುಕೊಂಡ ಕಂಬಳಿ ಧರಿಸಿಕೊಳ್ಳುತ್ತಾನೆ. ಮ್ಯಾಸ ಬೇಡರಲ್ಲಿ ತಮ್ಮದೆ ವೈಶಿಷ್ಟ್ಯಗಳನ್ನು ಹೊಂದಿರುವುದನ್ನು ಕಂಪಳ ದೇವರಹಟ್ಟಿಯಲ್ಲಿ ಕಾಣಬಹುದಾಗಿದೆ. ಪೂಜಾರಿಯ ಬರಿ ಮೈಯಲ್ಲಿ ಇರುತ್ತಾನೆ. ಅಂಗಿಯನ್ನು ತೊಡುವುದಿಲ್ಲ. ಆಧುನಿಕತೆಯ ಗಾಳಿ ಬೀಸಿದರೂ ತಮ್ಮ ಸಂಸ್ಕೃತಿಯನ್ನು ಇಲ್ಲಿ ಉಳಿಸಿಕೊಂಡು ಬಂದಿರುವುದು ಒಂದು ವಿಶಿಷ್ಟವಾಗಿದೆ.

ಕಂಪಳದೇವರ ಹಟ್ಟಿಯ ಕಂಪಳರಂಗಸ್ವಾಮಿಯ ಪೂಜಾರಿಯಾಗಿರುವ ಶ್ರೀಯುತ ರೇವಣ್ಣನವರು ಪದವಿ ಶಿಕ್ಷಣ ಪಡೆದವರು ಇವರು ಸಹ ಸದಾ ಬಟ್ಟೆ ಧರಿಸುವುದು ಉದ್ದನೆಯ ಒಂದು ಪಾದ ಮುಚ್ಚುವಂತೆ ಬಿಳಿಯ ಪಂಚೆ ಉಟ್ಟುಕೊಂಡು ತಲೆಗೆ ಬಿಳಿಯ ಬಟ್ಟೆಯನ್ನು ಕರೆಯುತ್ತಾರೆ. ಅನೇಕರು ಈ ಪ್ರದೇಶದಲ್ಲಿ ತಮ್ಮ ಬುಡಕಟ್ಟಿನ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗುತ್ತಿರುವುದು ಇಲ್ಲಿ ಕಂಡು ಬರುತ್ತದೆ.

ಜಗಳೂರಜ್ಜನ ಮೂರು ಧಾರ್ಮಿಕ ಕೇಂದ್ರಗಳಲ್ಲಿ ಗುಗ್ಗರಿ ಹಬ್ಬ ನಡೆಯುವುದು ಒಂದು ವಿಶೇಷ. ಬಂದಂತಹ ಭಕ್ತಾದಿಗಳೆಲ್ಲಾ ಪೂಜೆ ಮಾಡಿಸಿಕೊಂಡು ಗುಗ್ಗರಿಯನ್ನು ಪ್ರಸಾದವೆಂದು ಸ್ವೀಕರಿಸಿಯೇ ಹೋಗುವುದು ಇಲ್ಲಿಯ ಸಂಪ್ರದಾಯ.

## ಜಗಳೂರು ಪಾಪನಾಯಕನ ಆಚರಣೆಗಳು

ಶ್ರಾವಣಮಾಸದ ಮೊದಲನೆಯ ಅಥವಾ ಎರಡನೆಯ ಸೋಮವಾರ ಮಳೆಗಗಿ ಪಾಪನಾಯಕ ದೇವರ ಮೂರ್ತಿಯನ್ನು ಹೊರಡಿಸುವ ಆಚರಣೆ ನಡೆಯುತ್ತದೆ. ಈ ಆಚರಣೆಯಲ್ಲಿ ಬೇಡರ ಜೊತೆ ಗೊಲ್ಲರೂ ಸೇರಿಕೊಳ್ಳುವರು. ಪಾಪಿದೇವರ ಉತ್ಸವದ ವಿಗ್ರಹಗಳು ಪೂಜಾರಿ ಬೋಳೆಪಾಡಿನವರ ಮನೆಯಲ್ಲಿ ಇಂದಿಗೂ ಇವೆ. ಪೂಜಾರಿ ನಿಂಗಣ್ಣ ಆ ವಿಗ್ರಹಗಳನ್ನು ತಂದು ಗುಡಿಯಲ್ಲಿ ಸ್ಥಾಪಿಸಿ ಅಲ್ಲಿಂದ ಮತ್ತೆ ಮೆರವಣಿಗೆ ಹೊರಡಿಸುವಷ್ಟು ಹೊತ್ತಿಗೆ ಸಂಜೆ ಇಳಿಹೊತ್ತಿನ ಮೂರು ನಾಲ್ಕು ಗಂಟೆಯಾಗಿರುತ್ತದೆ. ಜಗಳೂರಿನಿಂದ ಸುಮಾರು ಎಂಟು ಮೈಲು ದೂರದಲ್ಲಿರುವ ಗುಹೇಶ್ವರನ ಗುಡ್ಡದ ಕಡೆಗೆ ನಾಯಕರ ಮತ್ತು ಗೊಲ್ಲರ ಸಮೂಹ ಪ್ರಯಾಣ ಮಾಡುತ್ತದೆ. ಗುಡ್ಡದ ಕೆಳಗಡೆ ಕಟ್ಟೆಮಲ್ಲನಾಯಕನ ಸಮಾಧಿ ಇದೆ. ಕಾಡುಕಲ್ಲು, ಮಣ್ಣು ಸೇರಿಸಿ ಗುಡ್ಡೆಯ ಮಾದರಿಯಲ್ಲಿ ಸಮಾಧಿ ಕಟ್ಟಲಾಗಿದೆ. ಇದರ ಸುತ್ತ ದೇವರ ಎತ್ತುಗಳ ಸಮಾಧಿ ಇದೆ. ಅದಕ್ಕೆ ಅಂದು ಪೂಜೆ ಸಲ್ಲಿಸುವರು. ಪೂಜೆಯೊಂದಿಗೆ ಭಜನೆಯ ಮೇಳವು ನಡೆಯುತ್ತದೆ. ಇಲ್ಲಿ ನೂರೊಂದು ಪೂಜೆಯಾದ ಮೇಲೆ ರಾತ್ರಿ ಮೂರು ಗಂಟೆಯ ಹೊತ್ತಿಗೆ ಸಮೂಹವೆಲ್ಲ ನಿಶ್ಯಬ್ಧವಾದ ಮೇಲೆ ಗುಡ್ಡದ ಹೊತ್ತಿಗೆ ಒಂದು ಸಣ್ಣ ಗುಡಿಯಿದ್ದು ಅಲ್ಲಿ ಲಿಂಗವಿದೆ. ಅಲ್ಲಿಗೆ ಜಂಗಮರು ಬೇಡರಿಗಿಂತ ಮೊದಲೇ ಹೋಗಿ ಗುಹೇಶ್ವರ ಲಿಂಗಕ್ಕೆ ಪೂಜಿಸುತ್ತಾರೆ. ನಂತರ ಬೇಡರು, ಗೊಲ್ಲರು ಪೂಜೆ ಮಾಡುತ್ತಾರೆ. ಪೂಜೆ ಮುಗಿದ ಮೇಲೆ ಎಲ್ಲರೂ ಕೆಳಗಿಳಿಯುವ ವೇಳೆಗೆ ಬೆಳಗಾಗುತ್ತದೆ. ಅಲ್ಲಿಂದ ಹಿಂದುರಿಗಿ ಜಗಳೂರಿನ ಕಡೆ ಬರುವಾಗ ಅರಿಷಿಣ ಗುಂಡಿ ಎಂಬ ಗ್ರಾಮ ಸಿಗುತ್ತದೆ. ಆ ಗ್ರಾಮಸ್ಥರು ಬೇಡರಿಗೆ ಹಗೂ ಗೊಲ್ಲರಿಗೆ ದಾಸೋಹ ನೀಡುವರು. ಇದರ ಮುಂದೆ ಸಿಕ್ಕುವ ಲಿಂಗಾನಹಳ್ಳಿಯೂ ದಾಸೋಹವಾಗುವುದು. ಅಲ್ಲಿಂದ ಪಾಪಿ ದೇವರ ಬೆಡಗಿನವರು ಜಗಳೂರಿನ ನಿವಾಸಿಗಳು ದಾಸೋಹ ನಡೆಸುವರು. ಈ ದಾಸೋಹಕ್ಕೆ ಗೊಲ್ಲರು ಜೋಳದ ನುಚ್ಚಿನ ಅನ್ನ,ಬೆಲ್ಲ, ಹಾಲು ತಂದು ಕೊಡುವರು. ಈ ಆಚರಣೆಯ ನಂತರ ಬೇಡರು, ಗೊಲ್ಲರು ತಮ್ಮ ಊರುಗಳನ್ನು ಸೇರಿದರೆ ಶ್ರಾವಣದಲ್ಲಿ ತಪ್ಪದೇ ಮಳೆ ಬರುವುದೆಂಬ ನಂಬಿಕೆ ಜಗಳೂರು ಸುತ್ತಲಿನ ಬೇಡನಾಯಕರು ಹಾಗೂ ಗೊಲ್ಲರಲ್ಲಿ ಇದೆ.

## ಸುಗ್ಗಿ ಸಂಬಂಧಿ ಆಚರಣೆಗಳು

ಹೊಸ ಧಾನ್ಯ ಬಂದ ಸಂದರ್ಭದಲ್ಲಿ ಜಗಳೂರಿನ ಮ್ಯಾಸ ಬೇಡರು ಈ ಹಬ್ಬವನ್ನು ಕೆರೆಯ ದಂಡೆಯಲ್ಲಿ ಇರುವ ಪಾಪನಾಯಕನ ಗುಡಿಯಲ್ಲಿ ನೆರವೇರಿಸುವರು. ಪೆಭವರಿ ತಿಂಗಳ ಹುಣ್ಣಿಮೆಯಂದ ಪ್ರತಿವರ್ಷ ಈ ಹಬ್ಬ ನಡೆಯುವುದಯೀ ಹಬ್ಬ ಇದು ರಾತ್ರಿ ನಡೆಯುವುದು. ಆದರೆ ಇಲ್ಲಿ ಯಾವ ಚಟುವಟಿಕೆಗಳು ಇರುವುದಿಲ್ಲ. ಮೂರ್‍ನಾಲ್ಕು ಜನ ಹೆಂಗಸರು ಗುಡಿಯ ಹೊರ ಮತ್ತು ಒಳ ಅಂಗಳವನ್ನು ಸಾರಿಸಿ ಶುದ್ಧ ಮಾಡಿ ರಂಗೋಲಿ ಹಾಕುವ ಕಾರ್ಯ ಮಾತ್ರ ಹಗಲು ನಡೆಯುತ್ತದೆ. ಮಧ್ಯಾಹ್ನ ಪೂಜಾರಿ ಬಂದು ದೇವರನ್ನು ಬಿದಿರು ಪುಟ್ಟಿಯಲ್ಲಿಟ್ಟುಕೊಂಡು ಊರೊಳಗಿನ ಅಕ್ಕಸಾಲಿ

ಮನೆಗೆ ಬಂದು ಅವುಗಳನ್ನು ಶುದ್ಧಿಗಾಗಿ ಕೊಡುತ್ತಾನೆ. ಶುದ್ಧಿಯಾದ ದೇವರುಗಳ ಅದೇ ಪುಟ್ಟಿಗೆಯು ದೇವಸ್ಥಾನವನ್ನು ಸೇರುತ್ತದೆ. ಅಷ್ಟು ಹೊತ್ತಿಗೆ ಪಾಪನಾಯಕನ ಗುಡಿಯ ಒಳಭಾಗದ ಅಂಗಳದಲ್ಲಿ ಹೆಂಗಸರು, ಗಂಡಸರು ಕೆಲವರು ಸೇರಿಕೊಂಡು ಕಲ್ಲಿನಿಂದ ಒಲೆ ಜೋಡಿಸಿ ಅದರ ಮೇಲೆ ದೊಡ್ಡ ದೊಡ್ಡ ಮಡಿಕೆಗಳನ್ನು ಅದರೊಳಗೆ ಹುರಳಿ ಜೋಳವನ್ನು ಹಾಕಿ ಬೇಯಿಸಲು ಪ್ರಾರಂಭಿಸುವರು.

ರಾತ್ರಿ ಎರಡು ಗಂಟೆಯಾಗುತ್ತಿದ್ದಂತೆಯೇ ಮ್ಯಾಸಬೇಡ ಸಮುದಾಯದವರ ಮನೆಯ ಹೆಂಗಸರು ಗುಂಪು ಕಳಸ ಕನ್ನಡಿ ಮೀಸಲು ಹಿಡಿದು ಎಡೆಯೊಡನೆ ಗುಡಿಯ ಕಡೆಗೆ ಬರುವರು. ಪೂಜಾರಿ ದೇವರನ್ನು ಬಿದಿರ ಪುಟ್ಟಿಯಲ್ಲಿ ಹೊಂಬಾಳೆ ಹೂವುಗಳೊಡನೆ ಅಲಂಕಾರ ಮಾಡಿ ಅದನ್ನು ತಲೆಯ ಮೇಲೆ ಇರಿಸಿಕೊಂಡು ದೇವಸ್ಥಾನ ಬಿಟ್ಟು ಹೊರಗೆ ಬಂದು ಓಡುವನು. ಪೂಜಾರಿಯ ಹಿಂದೆ ಜನಗಳೂ ಸಹ ಓಡುವರು. ಗುಡಿಯಿಂದ ಸುಮಾರು ಒಂದು ಪರ್ಲಾಂಗ್ ದೂರದ ಪಾದಗಟ್ಟೆಯ ಒಳಗೆ ಎಲ್ಲರೂ ದೇವರು ಸಹಿತ ಬರುವರು. ಪೂಜಾರಿ ದೇವರ ಪುಟ್ಟಿ ಯನ್ನು ಪಾದಗಟ್ಟೆಯ ಮೇಲೆ ಬೆಳೆದಿರುವ ಬುರುಗದ ಮರದ ಕೆಳಗಡೆ ಇಟ್ಟು ಪೂಜಿಸುವನು. ಇಲ್ಲಿ ರಾತ್ರಿ ಸುಮಾರು ಒಂದು ಗಂಟೆಯಾದರೂ ದೇವರ ಅಲಂಕಾರ, ಪೂಜೆ ಮಾಡಿ ಹಣ್ಣುಗಳನ್ನು ನೈವೇಧ್ಯಕ್ಕೆ ಇಡುವರು. ಪೂಜೆಯಾದ ಮೇಲೆ ಎಲ್ಲ ಭಕ್ತರು ಬುರುಗದ ಮರದ ಎಲೆಯನ್ನು ಕಿತ್ತು ಕೆಳಗೆ ಹಾಕುವುದರ ಮೂಲಕ ಮೇಲೆಳುವರು. ಪೂಜಾರಿ ದೇವರ ಪುಟ್ಟಿಯನ್ನು ತಲೆಯ ಮೇಲೆ ಇಟ್ಟುಕೊಂಡರೆ ವೀರಶೈವ ವ್ಯಕ್ತಿಯೊಬ್ಬನು ಬೆತ್ತ ಹಿಡಿದು ಬೇಡನಾಯಕ ಪೂಜಾರಿಗೆ ಆಸರೆಯಾಗಿ ನಿಲ್ಲುವನು. ಈ ವೀರಶೈವ ವ್ಯಕ್ತಿಯು ಮೆರವಣಿಗೆ ಮುಗಿಯುವವರೆಗೆ ದೇವರನ್ನು ಹೊತ್ತ ಪೂಜಾರಿಯ ಜೊತೆಯಲ್ಲಿಯೇ ಇರುತ್ತಾನೆ. ಪಾಪನಾಯಕ ದೇವರನ್ನು ಹೊತ್ತ ಬೇಡರ ಪೂಜಾರಿ ಬರಿ ಮೈಯಲ್ಲಿದ್ದು ಕೇವಲ ಒಂದು ಚಿಲ್ಲಣ ಮಾತ್ರ ತೊಟ್ಟಿರುತ್ತಾನೆ. ಆದರೆ ವೀರಶೈವ ವ್ಯಕ್ತಿ ಕಚ್ಚೆ, ಕೋಟು, ಪೇಟ ಸುತ್ತಿ ಕೈಯಲ್ಲಿ ಬೆಳ್ಳಿಕಟ್ಟಿನ ಬೆತ್ತ ಹಿಡಿದಿರುತ್ತಾನೆ. ಬುರುಗದ ಮರದ ಪಾದಗಟ್ಟೆಯ ಬಳಿ ಮೆರವಣಿಗೆ ಆರಂಭವಾದಾಗ ಬೇಡ ನಾಯಕರು ದಾಸಯ್ಯ ಮಣೆ ಆಡುತ್ತಾರೆ. ಅಲ್ಲಿಂದ ಹೊರಟ ಮೆರವಣಿಗೆ ಜಗಳೂರಿನ ಕೊನೆಯ ಭಾಗದ ಒಂದೆರಡು ಬೀದಿಗಳನ್ನು ಸುತ್ತಿಕೊಂಡು ಮತ್ತೆ ಪಾಪನಾಯಕನಗುಡಿಯ ಹತ್ತಿರ ಬರುವ ಹೊತ್ತಿಗೆ ಮೋಡ ಕಂಪೇರುತ್ತಿರುತ್ತದೆ. ಸೂರ್ಯನು ಪೂರ್ವದಲ್ಲಿ ಹುಟ್ಟುತ್ತಿರುವಾಗಲೇ ದೇವರು ಗುಡಿಯ ಹತ್ತಿರ ಬರುತ್ತದೆ. ದೇವರು ಐವತ್ತು ಗಜ ದೂರವಿರುವಾಗಲೇ ಹರಕೆಯನ್ನು ಹೊತ್ತುಕೊಂಡು ಜನರು ದೇವರು ಬರುವ ದಾರಿಗೆ ಅಡ್ಡವಾಗಿ ಮಲಗಿ ಬಿಡುವರು. ದೇವರು ಹೊತ್ತ ಪೂಜಾರಿ ಮತ್ತು ಪೂಜಾರಿಯನ್ನು ಹಿಡಿದು ಕೊಂಡ ಶರಣರು ಇಬ್ಬರೂ ಮಲಗಿರುವ ಭಕ್ತರನ್ನು ದಾಟಿಕೊಳ್ಳುತ್ತಾ ಹೋಗಿ ಗುಡಿ ಸೇರುವರು.

ದೇವರು ಗುಡಿ ಸೇರಿದ ಮೇಲೆ ಮಡಿಕೆ ಸೋರೆಗಳಲ್ಲಿ ಬೇಯಿಸಿದ ಹುರುಳಿ ಜೋಳದ ಗುಗ್ಗರಿಯನ್ನು ಪ್ರಸಾದವಾಗಿ ಎಲ್ಲರಿಗೂ ಹಂಚುತ್ತಾರೆ. ಹೀಗೆ ಪ್ರಸಾದ ಹಂಚುವಲ್ಲಿಗೆ ಹಬ್ಬ

ಕೊನೆಯಾಗುತ್ತದೆ. ಮ್ಯಾಸಬೇಡರ ಸಮುದಾಯದಲ್ಲಿ ಸುಗ್ಗಿಯಲ್ಲಿ ಬಂದಂತಹ ಬೆಳೆಗಳನ್ನು ದೇವರಿಗೆ ನೈವೇದ್ಯ ಮಾಡಿದ ನಂತರ ತಾವು ದವಸ ಧಾನ್ಯಗಳನ್ನು ಉಪಯೋಗಿಸುತ್ತಾರೆ. ಈ ಸಮುದಾಯದಲ್ಲಿ ಬೆಳೆಗಳನ್ನು ಬೆಳೆದು ದೇವರಿಗೆ ಅರ್ಪಿಸುವ ಆಚರಣೆ ಬಹಳ ಹಿಂದಿನಿಂದಲೂ ನಡೆಯುತ್ತಾ ಬಂದಿದೆ. ಕೃಷಿ ಸಮುದಾಯ ಆಚರಿಸುವಂತಹ ವಿಶಿಷ್ಟವಾದ ಆಚರಣೆಗಳು ಇವಾಗಿವೆ. ಈ ವೇಳೆಯಲ್ಲಿ ಕೃಷಿಯಿಂದ ಬಂದಂತಹ ಬೆಳೆಗಳನ್ನು ಬೆಳೆದು ಜನರು ಬಹಳ ಸಂತೋಷದಿಂದ ಇರುತ್ತಾರೆ.

**ಟಿಪ್ಪಣಿಗಳು**

೧. ನುಂಕೆಮಲೆ ಸಾಂಸ್ಕೃತಿಕ ಅಧ್ಯಯನ ಅಪ್ರಕಟಿತ ಪ್ರಬಂಧ, ಪು.ಸಂ –೨೮

೨. ಮ್ಯಾಸಮಂಡಲ, ಪು.ಸಂ–೩೫

೩. ವಾಲ್ಮೀಕಿ ಸಿರಿ, ಪು.ಸಂ–೮೧

೪. ಮ್ಯಾಸಬೇಡ ಸಂಸ್ಕೃತಿ, ಪು.ಸಂ. ೧೧೭–೧೧೮

೫. ಬುಡಕಟ್ಟು ಅಧ್ಯಯನ ಪತ್ರಿಕೆ – ೪, ಪು.ಸಂ.೫೩–೫೯

೬. ಮ್ಯಾಸಬೇಡರ ಒಂದು ಜನಾಂಗಿಕ ಅಧ್ಯಯನ, ಪು. ಸಂ –೮೭

# ಅಧ್ಯಾಯ ನಾಲ್ಕು
## ಜಗಳೂರು ಪಾಪನಾಯಕನ ತಾತ್ವಿಕತೆ

ಜಗಳೂರು ಪಾಪನಾಯಕನು ಮ್ಯಾಸಬೇಡರ ಬುಡಕಟ್ಟಿನ ಧಾರ್ಮಿಕ ಪುರುಷನಾಗಿ ಕಾಣು ತ್ತಾನೆ. ಬುಡಕಟ್ಟಿನ ಏಳಿಗೆಯನ್ನು ರೂಪಿಸಲು ಇಂತಹ ಸಾಂಸ್ಕೃತಿಕ ವ್ಯಕ್ತಿಗಳ ಅವಶ್ಯಕತೆ ಪ್ರತಿಯೊಂದು ಬುಡಕಟ್ಟಿಗೂ ಇರುತ್ತದೆ. ಮ್ಯಾಸಬೇಡರ ಆರಾಧನೆಗೆ ಹೊಸರೂಪವನ್ನು ಜಗಳೂರು ಪಾಪನಾಯಕ ನೀಡಿದ್ದಾನೆ. ಈ ಸಾಂಸ್ಕೃತಿಕನಾಯಕನ ಜನನವು ಬಹಳ ವಿಶಿಷ್ಟಪೂರ್ಣವಾದದ್ದು. ತಾಯಿಯ ಗರ್ಭದಿಂದ ಹೊರ ಬರುವಾಗ ಶಿಶುವು, ಮಾತನಾಡುವುದು ಮತ್ತು ಕಾಲನ್ನು ಮುಂದುಮಾಡಿಕೊಂಡು ಜನಿಸುವುದು ಕಂಡು ಬರುತ್ತದೆ. ಕಾಡುಗೊಲ್ಲರ ಸಾಂಸ್ಕೃತಿಕನಾಯಕ ಜುಂಜಪ್ಪನ ಜನನವೂ ಸಹ ಇದೇ ರೀತಿಯಾಗಿ ಕಂಡು ಬರುತ್ತದೆ.

ದಿವ್ಯ ಪ್ರತಿಭೆಯುಳ್ಳ ನಾಯಕನ ಮುಖ್ಯ ಲಕ್ಷಣವೆಂದರೆ ಅವನ ಸಂದೇಶ ಮುಕ್ತ ಸ್ವರೂಪದ್ದಾ ಗಿರುತ್ತದೆ. ನಾಯಕನ ಸಂದೇಶವಾಹಕವಾದುದು. ಈ ನಾಯಕನ ಹಿಂಬಾಲಕನಾಗಿರುವುದಿಲ್ಲ. ಕೇವಲ ಸಾಕ್ಷಿಯಾಗಿರುವುದನ್ನು ಪಾಪನಾಯಕನಲ್ಲಿ ಕಾಣಬಹುದು.

ಜಗಳೂರು ಪಾಪನಾಯಕನ ಹೋರಾಟದ ಸ್ವರೂಪವೇ ಬೇರೆ. ರಾಜಪ್ರಭುತ್ವವು ಹೇರಿದ ಅಧಿಕ ತೆರಿಗೆಯಿಂದ  ಜನ ಕಂಗಾಲಾಗಿದ್ದಾಗ ರಾಜನನ್ನು ತನ್ನ ಜಾಣ್ಮೆಯಿಂದ ಮಣಿಸಿ ತೆರಿಗೆಯನ್ನು ರದ್ದುಪಡಿಸುವಂತೆ ಮಾಡುತ್ತಾನೆ. ಹಾಗೆಯೇ ವರ್ಣ ವ್ಯವಸ್ಥೆ ಉಂಟು ಮಾಡಿದ ಜಾತಿ ವ್ಯವಸ್ಥೆ ಅದರಿಂದ ವರ್ಣ ವೈರುಧ್ಯ ಇದರ ವಿರುದ್ಧ ಆತ ಬಂಡೆದ್ದು ತಿರುಪತಿಯ ಯಾತ್ರೆ ಮಾಡಿ ಅಲ್ಲಿ ತಿರಸ್ಕಾರಕ್ಕೊಳಗಾಗಿ ನಂತರ ದೇವರ ಆದರಕ್ಕೆ ಪಾತ್ರನಾಗಿರುವುದರ ಮೂಲಕ ಗೆಲುವನ್ನು ಸಾಧಿಸುತ್ತಾನೆ. ಧೂರ್ತನಾದ ಕ್ಯಾಸಯ್ಯ ತನ್ನ ಪತ್ನಿಯನ್ನು ಅಂದರೆ ಜಗಳೂರು ಪಾಪನಾಯಕನ ಸೋದರತ್ತೆಯನ್ನು ಕ್ಷುಲ್ಲಕ ಕಾರಣದಿಂದ ತ್ಯಜಿಸಿರುತ್ತಾನೆ. ಈತನಿಗೆ ಪಾಠ ಕಲಿಸಿ ತವರು ಸೇರಿದ್ದ ತನ್ನ ಅತ್ತೆ ತನ್ನ ಗಂಡನೊಂದಿಗೆ ಕೂಡಿ ಬಾಳುವಂತೆ ಮಾಡುತ್ತಾನೆ. ಈ ಸ್ತ್ರೀಪರ ಕಾಳಜಿಯ ಮೂಲಕವಾಗಿಯೇ ಈತ ಸ್ತುತ್ಯಾರ್ಹನಾಗುತ್ತಾನೆ. ಒಟ್ಟಾರೆ ತಮ್ಮ ಸಮುದಾಯಕ್ಕೆ ಬದುಕುವ ವಿಧಾನವನ್ನು ತೋರಿಸಿಕೊಟ್ಟರೆ ರಕ್ಷಿಸಿದರೆ, ವೀರನಾಯಕ ಎಂದು ಸಾಮಾನ್ಯವಾಗಿ ಪರಿಗಣಿಸಲ್ಪಡುತ್ತಾರೆ. ಜಗಳೂರು ಪಾಪನಾಯಕ ಮ್ಯಾಸಬೇಡ ಸಮುದಾಯದಲ್ಲಿ ವೈಚಾರಿಕ ಪ್ರಜ್ಞೆಯನ್ನು ಹುಟ್ಟು ಹಾಕಿದ ಮತ್ತು ತನ್ನ ಹೊಸ

ಆಲೋಚನಾ ವಿಧಾನಗಳ ಮೂಲಕ ಸಮುದಾಯದ ಗೌರವಕ್ಕೆ ಪಾತ್ರನಾಗಿ ಆರಾಧಿಸಲ್ಪಡುತ್ತಾನೆ. ಕೇವಲ ಕತ್ತಿ, ಖಡ್ಗ, ಹಿಡಿದು ಹೋರಾಟ ಮಾಡಿದವರು ಮಾತ್ರ ನಾಯಕರಲ್ಲ. ಅವಿಲ್ಲದೆಯೇ ಸಂದರ್ಭದಲ್ಲಿ ಮೆಟ್ಟಿ ನಿಲ್ಲುವ ಸಾಧ್ಯತೆಗಳು ಉಂಟು.

ಸಾಮಾನ್ಯವಾಗಿ ಪ್ರತಿಯೊಂದು ಬುಡಕಟ್ಟಿಗೂ ಮೌಖಿಕವಾದ ಸಾಹಿತ್ಯ ಇದ್ದೇ ಇರುತ್ತದೆ. ಅದು ಪದ್ಯರೂಪದಲ್ಲಿರಬಹುದು ಇಲ್ಲವೇ ಗದ್ಯದ ನಿರೂಪಣೆಯಾಗಿರಬಹುದು. ಯಾವ ರೂಪದಲ್ಲಿದ್ದರೂ ನಮಗೆ ಆ ಸಮುದಾಯವನ್ನು ಅರಿಯಲು ಅದರ ಸೂಕ್ಷ್ಮಗಳನ್ನು ಸಮುದಾಯದಲ್ಲಿ ಬಹುಮಟ್ಟಿಗೆ ಅಲ್ಲಿ ಜೀವಂತವಾಗಿರುವ ಮೌಖಿಕ ರೂಪಗಳು ಮತ್ತು ಆಚರಣೆಗಳು ಈ ಸಂಸ್ಕೃತಿಯನ್ನು ಅರಿಯಲು ಬಲವಾದ ಆಕರಗಳಾಗುತ್ತವೆ. ಮ್ಯಾಸಬೇಡರು ಅಥವಾ ಮ್ಯಾಸನಾಯಕರಲ್ಲಿಯ ಸಾಂಸ್ಕೃತಿಕನಾಯಕರ ಬಗ್ಗೆ ಸಾಕಷ್ಟು ಕಥನಗಳು ಗದ್ಯ ಮತ್ತು ಪದ್ಯ ರೂಪದಲ್ಲಿ ಕಂಡು ಬರುತ್ತವೆ.

'ಒಂದು ಸಮುದಾಯದ ಉತ್ಪಾದನಾ ವ್ಯವಸ್ಥೆಗೂ ಅದರ ಆರ್ಥಿಕ ಸ್ಥಿತಿಗತಿಗಳಿಗೂ ನಮ್ಮ ಸಾಂಸ್ಕೃತಿಕ ನಾಯಕರಿಗೂ ಸಂಬಂಧವಿದೆ. ನಮ್ಮ ಸಮುದಾಯದೊಳಗೆ ರಾಜಕೀಯ ಆರ್ಥಿಕ ಕಾರಣಗಳಿಂದ ಇವರ ಮಹತ್ವ ಇನ್ನೂ ಹೆಚ್ಚಿದೆ. ಇವರು ತಮ್ಮ ಜೀವನಾವಧಿಯ ಉದ್ದಕ್ಕೂ ತಮ್ಮ ಸಮುದಾಯಗಳ ರಾಜಕೀಯ ಮತ್ತು ಆರ್ಥಿಕ ಸ್ವಾವಲಂಬನೆಗೆ ಹೆಚ್ಚು ಶ್ರಮಿಸುತ್ತಾರೆ. ಜಗಳೂರು ಪಾಪನಾಯಕ ತನ್ನ ಸಮುದಾಯದ ಉತ್ಪಾದನೆಯ ಮೂಲಗಳಾದ ಪಶುಗಳನ್ನು ರಕ್ಷಿಸಲು ಮತ್ತು ಉತ್ಪಾದನೆಯನ್ನು ಹೆಚ್ಚಿಸಲು ಹೆಣಗಾಡುತ್ತಾನೆ. ಶತ್ರುಗಳೊಂದಿಗೆ ಹೋರಾಟ ಮಾಡಿ ತನ್ನ ಸಮುದಾಯ ಮತ್ತು ಪಶುಗಳ ಕಲ್ಯಾಣಕ್ಕಾಗಿ ಶ್ರಮಿಸುತ್ತಾನೆ. ಜಗಳೂರು ಪಾಪನಾಯಕ ಜೀವಿತಾವಧಿಯ ಉದ್ದಕ್ಕೂ ಬರೀ ಸಂಘರ್ಷಗಳಲ್ಲಿಯೇ ತೊಡಗುತ್ತಾನೆ. ಈತನ ಕಾಲಕ್ಕಾಗಲೇ ರಾಜಶಾಹಿ ಬಲಗೊಂಡಿರುತ್ತದೆ. ಪಾಳೆ ಪಟ್ಟುಗಳು ಅಸ್ಥಿತ್ವಕ್ಕೆ ಬಂದಿರುತ್ತವೆ. ಕಬ್ಬಿಣದ ಆಯುಧಗಳ ಬಳಕೆ ಶುರುವಾಗುತ್ತದೆ. ಈತನ ಸ್ಥಾಪಿಸಿದ ಸೂರ್ಯ ನಂದನ ಕಠಾರಿ ಸಿಡಿಲ ಮಿಂಚಿನ ಕಠಾರಿಗಳು ಆಯುಧಗಳ ಬಳಕೆಯನ್ನು ಸೂಚಿಸುತ್ತದೆ. ರಾಜ ಅಧಿಕ ತೆರಿಗೆಯನ್ನು ಜನ ಸಾಮಾನ್ಯರ ಮೇಲೆ ಹೇರುತ್ತಿರುತ್ತಾನೆ. ಪುರೋಹಿತಶಾಹಿಯು ಮಂತ್ರಿಯ ಪಟ್ಟದಲ್ಲಿದ್ದು ರಾಜನನ್ನು ನಿಯಂತ್ರಿಸುತ್ತಿರುತ್ತದೆ. ಗೋಣೂರು ಮತ್ತು ಜಗಳೂರು ಪ್ರಾಂತ್ಯದಲ್ಲಿ ಪ್ರಭುತ್ವ ಹೇರಿದ ಅಧಿಕ ತೆರಿಗೆ ಸಾಮಾನ್ಯರನ್ನು ಕೆಂಗೆಡಿಸಿರುತ್ತದೆ. ಅಲ್ಲಿಗೆ ಜಗಳೂರಜ್ಜನ ಪ್ರವೇಶವಾಗುತ್ತದೆ. ತನ್ನ ಸಮುದಾಯದ ಪರವಾಗಿ ಜಗಳೂರಜ್ಜ ರಾಜನನ್ನು ತನ್ನ ಪವಾಡಗಳಿಂದ ಸೋಲಿಸಿ ತೆರಿಗೆಯನ್ನು ರದ್ದುಪಡಿಸುತ್ತಾನೆ. ಆದರೆ ಜಗಳೂರಿನ ರಾಜನ ದುಷ್ಟತನದ ವಿರುದ್ಧ ಹೋರಾಟದಲ್ಲಿ ಮಾತ್ರ ಜಗಳೂರಜ್ಜ ರುದ್ರ ಭಯಂಕರವಾಗಿ ಹೋರಾಡುತ್ತಾನೆ ಏಕಾಂಗಿಯಗಿ ಇಡೀ ರಾಜ್ಯದ ಸೈನ್ಯವನ್ನು ಧ್ವಂಸ ಮಾಡುತ್ತಾನೆ. ಆಗ ತಿರುಪತಿಯ ವೆಂಕಟೇಶ್ವರ ಸ್ತ್ರೀವೇಶದಲ್ಲಿ ಹಿಂದಿನಿಂದ ಬಂದು ಜಗಳೂರಜ್ಜನನ್ನು ಬಾಣ ಬಿಟ್ಟು ಕೊಲ್ಲುತ್ತಾನೆ. ಸಾಯುವಾಗ

ಜಗಳೂರಜ್ಜ ನೀನು ಹೆಣ್ಣು ನಿನ್ನ ಮೇಲೆ ಬಾಣ ಪ್ರಯೊಗ ಮಾಡೋದಿಲ್ಲ. ಬದಿಕ್ಕೋ ಹೋಗು ಎಂದು ಪ್ರಾಣ ಬಿಡುತ್ತಾನೆ. ಜಗಳೂರಜ್ಜನ ಒಕ್ಕಲುತನದವರೆಲ್ಲ ಕೃಷಿಕರಾಗಿರುವುದು ಕಂಡು ಬರುತ್ತದೆ. ಇವರಲ್ಲಿ ಆರಾಧ್ಯದೈವವಾಗಿ ಜನಪ್ರೀಯವೂ ಆಗಿರುವುದರಲ್ಲಿ ಆಶ್ಚರ್ಯವೇನಿಲ್ಲ,

ಹೀಗಾಗಿ ಅಧೀನ ಸಮುದಾಯಗಳ ಸೃಷ್ಟಿ ಶೀಲ ಚೈತನ್ಯ ಮತ್ತು ಕಥೆಯೊಳಗೆ ಅದು ರೂಪಿಸುವ ಬಲಿಷ್ಟ ಸಾಂಸ್ಕೃತಿಕ ನಾಯಕ ಮತ್ತು ಆ ಮೂಲಕ ತಾನು ಕಟ್ಟಿಕೊಳ್ಳುವ ವಿಚಾರ ಬದ್ಧ ಹೋರಾಟ ಇವುಗಳೆಲ್ಲ ಸಾಂಸ್ಕೃತಿಕ ಪ್ರಭುತ್ವದ ದಬ್ಬಾಳಿಕೆಯ ತೀವ್ರತೆಯಿಂದ ರೂಪಗೊಂಡಿರುತ್ತವೆ. ಈ ನಿಟ್ಟಿನಲ್ಲಿ ಜಾನಪದ ಚರಿತ್ರೆಯ ಗತಿಯಲ್ಲಿ (ಕರ್ನಾಟಕಕ್ಕೂ ಇದು ಅನ್ವಯವಾಗುತ್ತದೆ.ಎನ್ನುವ ನಂಬಿಕೆ ನನ್ನದು) ಸಂಸ್ಕೃತಿಯ ಸೃಜನಶೀಲ ರಹದಾರಿಗಳು ಹೊರಹೊಮ್ಮಿರುವುದೇ ಮಾರ್ಗದ ಏಕಮುಖಿ ಆಕೃತಿಯ ವಿರುದ್ಧದ ನಿಲುವಿನಲ್ಲಿ ಈ ಅಸಹಾಯಕ ಸಮುದಾಯಗಳು ಬಚ್ಚಿಟ್ಟ ನೋವು ಮತ್ತು ತವಕಿಸಿದ ಕನಸುಗಳೇ ಗೋಚರಿಸುತ್ತವೆ. ಅದಕ್ಕಾಗಿ ನಾವು ಈ ಕಥನಗಳನ್ನು ನಮ್ಮಲ್ಲಿಯ ಸಾಂಸ್ಕೃತಿಕ ರಾಜಕಾರಣದ ಸಂಕೀರ್ಣ ದಬ್ಬಾಳಿಕೆಗೆ ಪ್ರತಿಯಾಗಿ ಹುಟ್ಟಿದ ಕೆಳವರ್ಗಗಳ ತಲ್ಲಣಗಳಂತೆ ನೋಡಬೇಕಿದೆ. ಒಂದು ಸಾಂಸ್ಕೃತಿಕ ಪ್ರಭುತ್ವಕ್ಕೆ ಪ್ರತಿಯಾಗಿ ಬಂಡೆದ್ದ ಅನೇಕ ಆಧ್ಯಾತ್ಮಿಕ ದಂಗೆಗಳು ಇಂದು ನಮ್ಮ ಸಮುದಾಯಗಳ ಪ್ರಜ್ಞೆಯಾಳದಲ್ಲಿ ಜೀವಂತವಾಗಿವೆ. ಜಗಳೂರಜ್ಜನ ಕಥೆ ನಿಸ್ಸಂಶಯವಾಗಿ ಸಾಂಸ್ಕೃತಿಕ ಪ್ರಭುತ್ವದ ವಿರುದ್ಧ ಶೋಷಿತ ವರ್ಗಗಳು ನಡೆಸಿದ ಸೃಜನಶೀಲ ತಾತ್ವಿಕ ಹೋರಾಟಗಳೇ ಆಗಿವೆ. ಇವು ತಿರಸ್ಕೃತ ಸಮುದಾಯಗಳ ಸಾಂಸ್ಕೃತಿಕ ಆತ್ಮ ಕತನಗಳು ಹೌದು ಏಕೆಂದರೆ ಇವು ಸಾಂಸ್ಕೃತಿಕ ವಿಸ್ತರಣೆ ಮತ್ತು ಅನನ್ಯತೆಯನ್ನು ಬಲವಾಗಿ ಪ್ರತಿಪಾದಿಸುತ್ತದೆ.

ಸಮುದಾಯದ ಸಾಂಸ್ಕೃತಿಕ ವಿವರಗಳು ದಟ್ಟವಾಗಿರುವ ಕಥೆಗಳನ್ನು ದಾಖಲಿಸುವುದಕ್ಕಾಗಿ ನಾನು ಪೆತ್ತಂಬರಹಟ್ಟಿ ಚಳ್ಳಕೆರೆ ಪಕ್ಕದ ಪೂಜಾರಿಹಟ್ಟಿಯ ಜಗಳೂರಜ್ಜನ ಪೂಜಾರಿ ಮತ್ತು ಚಳ್ಳಕೆರೆಯ ಕಾಟಪ್ಪನಹಟ್ಟಿ ತಿಪ್ಪೇಸ್ವಾಮಿ ಇವರನ್ನು ಸಂದರ್ಶಸಿದೆ.

ಮದ್ಯಕರ್ನಾಟಕದ ಬಯಲುಸೀಮೆಯ ಬಹುಪಾಲನ್ನು ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಆವರಿಸಿಕೊಂಡಿದ್ದಾರೆ. ಕರ್ನಾಟಕದ ಈ ಹೃದಯಭಾಗವನ್ನು ತಮ್ಮ ವಿಶಿಷ್ಟ ಜೀವನ ಕ್ರಮದಿಂದ ಈ ಎರಡು ಬುಡಕಟ್ಟುಗಳು ಜೀವಂತವಾಗಿರಿಸಿವೆ. ಸಂಪದ್ಭರಿತ ಸಾಂಸ್ಕೃತಿಕ ಸಂಸ್ಕೃತಿಗಳನ್ನು ಈ ಎರಡು ಬುಡಕಟ್ಟುಗಳು ಜತನದಿಂದ ಕಾಪಾಡಿಕೊಂಡು ಬಂದಿವೆ. ಮ್ಯಾಸಬೇಡರ ಸಾಂಸ್ಕೃತಿಕ ಬದುಕಿನ ವ್ಯವಸ್ಥಿತ ಅಧ್ಯಯನ ನಮಗೆ ಮದ್ಯಕಾಲೀನ ಸಾಮ್ರಾಜ್ಯಗಳ ಚರಿತ್ರೆಯ ಇನ್ನೊಂದು ಮಗ್ಗಲನ್ನು ಪರಿಚಯಿಸುತ್ತದೆ.

ಜಗಳೂರು ಪಾನಾಯಕನು ಮ್ಯಾಸಬೇಡರ ಬುಡಕಟ್ಟಿನ ಧಾರ್ಮಿಕ ಪುರುಷನಾಗಿ ಕಾಣುತ್ತಾನೆ. ಬುಡಕಟ್ಟಿನ ಸಂಸ್ಕೃತಿಯನ್ನು ರೂಪಿಸಲು ಆಗಾಗ್ಗೆ ಇಂತಹ ಸಾಂಸ್ಕೃತಿಕ ವ್ಯಕ್ತಿಗಳ ಅವಶ್ಯಕತೆ ಪ್ರತಿಯೊಂದು

ಬುಡಕಟ್ಟಿಗೂ ಇರುತ್ತದೆ. ಇವರು ಅಲಕ್ಷಿತ ನಾಯಕರು. ಜಗಳೂರಜ್ಜ ಈ ಬುಡಕಟ್ಟಿಗೆ ಒಂದು ಸಂಸ್ಕೃತಿಯ ಕಟ್ಟನ್ನು ಕೊಟ್ಟವನು. ಪಾಪನಾಯಕ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು, ಜಗಳೂರು ತಾಲೂಕಿನ ಜನರ ಮನದಲ್ಲಿ ಇಂದಿಗೂ ರಾರಾಜಿಸುತ್ತಿದ್ದಾನೆ. ಜುಂಜಪ್ಪನ ಕೆಲವು ಲಕ್ಷಣಗಳನ್ನು ಇವನಲ್ಲಿಯೂ ಸಹ ನಾವು ಕಾಣಬಹುದು. ಈ ವೀರನ ಜನನವೂ ಬಹಳ ವಿಶಿಷ್ಟಪೂರ್ಣವಾದದ್ದು ತನ್ನ ತಾಯಿಯ ಗರ್ಭದಿಂದ ಹೊರ ಬರುವಾಗ ಶಿಶುವು ಮಾತನಾಡುವುದು ಮತ್ತು ಕಾಲನ್ನು ಮುಂದುಮಾಡಿ ಜನಿಸುವುದು ವಿಶೇಷವಾಗಿದೆ.

ಜಗಳೂರು ಪಾಪನಾಯಕ ಭೂಮಿಗೆ ಬರುವಾಗ ಗುಂಡುಕಲ್ಲಿನ ಆಕಾರವಾಗಿ ಹೊರಬರುತ್ತಾನೆ. ಇದನ್ನು ಕಂಡ ತಂದೆ ತಾಯಿಗಳು ಭಯಬೀತರಾಗಿ ಕಾಡಲುಕುಂಟದ ಬಳಿ ಬಿಟ್ಟು ಹೋಗುತ್ತಾರೆ. ಆಗ ಮಗು ಅಳುತ್ತಿರುವಾಗ ಶಿವಪಾರ್ವತಿಯರು ಲೋಕಸಂಚಾರಿಗಳಾಗಿ ಬರುವಾಗ ಈ ಮಗುವಿನ ಆಕ್ರಂದನ ಕೇಳಿ ಬಂದು ಈ ಬಾಲಕನಿಗೆ (ಶಿಶುವಿಗೆ) ಪರದೇಶಿ ಪಾಪಣ್ಣ ಎಂದು ನಾಮಕರಣ ಮಾಡಿ ಒಂದು ಮರಕ್ಕೆ ಜೋಕಾಲಿಯನ್ನು ಕಟ್ಟಿ ಅದರೊಳಗೆ ಮಗುವನ್ನು ಮಲಗಿಸಿ ಹೋಗುತ್ತಾರೆ. ಸಾಮಾನ್ಯವಾಗಿ ಎಲ್ಲ ಜನಪದ ಕಥೆಗಳಲ್ಲಿ, ವೀರರ ದಿವ್ಯಚರಿತ್ರೆಯಲ್ಲಿ ಈ ಶಿವಪಾರ್ವತಿಯರ ಅನುಗ್ರಹ ಅವರ ಮೇಲೆ ಇದ್ದೇ ಇರುತ್ತದೆ. ಎಂದು ಈ ಬುಡಕಟ್ಟಿನವರು ನಂಬಿದ್ದಾರೆ. ಮುಂದೆ ಪಾಪನಾಯಕ ಸರ್ಪದ ಭಾದೆಯನ್ನು ತಪ್ಪಿಸಿದ್ದರಿಂದ ನಾಗಮುರಿ ಬೆತ್ತ ದೊರೆಯುತ್ತದೆ. ಈ ಬೆತ್ತದಿಂದ ಏನೆಲ್ಲವನ್ನು ತಯಾರಿಸಬಹುದು. ಇದು ಜನಪದ ಕಥೆಗಳಲ್ಲಿ ಮಂತ್ರ ದಂಡೋಪಾದಿಯಲ್ಲಿ ಇರುವುದು ಜಗಳೂರಜ್ಜನದು. ಒಟ್ಟಾರೆಯಾಗಿ ಆತನ ತಾತ್ವಿಕತೆ ಏನೆಂದರೆ ಅನ್ಯಾಯದ ವಿರುದ್ದ ಹೋರಾಡುವುದೇ ಮುಖ್ಯ ಕೆಲಸವಾಗಿರುತ್ತದೆ. ಈತನ ಚರಿತ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಾತ್ವಿಕತೆ ಏನೆಂಬುದನ್ನು ಕಾಣಬಹುದು.

ಪಾಪನಾಯಕ ತಿರುಪತಿಗೆ ಹೋದ ಪ್ರಸಂಗವನ್ನು ಗಮನಿಸಿದಾಗ ಪಾಪನಯಕ ಅಂತಹ ಶಿಷ್ಟದೈವರಾದ ತಿಮ್ಮಪ್ಪನಲ್ಲಿಗೆ ಹೋಗಿ ತಿಮ್ಮಪ್ಪನ ಮುಂದೆ ಪವಾಡ ಮೆರೆದು ತಿಮ್ಮಪ್ಪನೆ ಸೋತು ಪಾಪನಾಯಕನ ಹತ್ತಿರ ಬಂದು ದರ್ಶನ ನೀಡಿ ಕೆಲವು ವರಗಳನ್ನು ಅನುಗ್ರಹಸಿದನು. ಅಂದರೆ ತಿಮ್ಮಪ್ಪನಿಂದ ವರಗಳ ಪಡೆದ ಮಹಾಪುರುಷರರಾಗಿದ್ದಾರೆ. ಎನ್ನುವ ನಂಬಿಕೆ ಇವರಲ್ಲಿದೆ. ಈತನು ತಿರುಪತಿಗೆ ಹೋಗಲು ವೈಷ್ಣವ ಪ್ರಭಾವ ಬೀರುವುದು, ಈ ಕಾರಣದಿಂದಲೇ ತಿರುಪತಿಗೆ ಹೋಗಿರಬಹುದು. ಇದೇ ರೀತಿ ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆದು ಪಾರ್ಥನಾದ ಪ್ರಸಂಗವನ್ನು ನೆನಪಿಸಿಕೊಳ್ಳಬಹುದು. ಮುಂದೆ ಒರೆಗಲ್ಲು ಪಟ್ಟಣದಲ್ಲಿ ದುರ್ಗಿಯೆಂಬ ರಾಕ್ಷಸಿಗೆ ಬಲಿಯಾಗುತ್ತಿರುವ ಕೊನೆಗೆ ದುರ್ಗಿಯ ಶಾಪದಿಂದಲೆ ಇವನ ಅವಸಾನವಾಗುವುದನ್ನು ಕಾಣಬಹುದು. ಮುಂದೆ ತನ್ನ ಸೋದರ ಮಾವನಾದ ಕ್ಯಾಸಯ್ಯನಿಗೆ ಬುದ್ದಿ ಕಲಿಸುವ ಸನ್ನಿವೇಶ ಬಹಳ ಮಹತ್ವಪೂರ್ಣವಾದುದು.

ಪಾಪನಾಯಕ ತನ್ನ ತಾಯಿಯ ಗರ್ಭದಿಂದ ಹೊರ ಬರುವಾಗ ಸೂಲಗಿತ್ತಿತನ ಮಾಡುವ ತನ್ನ ಸೋದರ ಅತ್ತಿಗೆಗೆ ಕಾಲಿನಿಂದ ಒಡೆದಾಗ ಅವಳ ಹಲ್ಲು ಮುರಿದು ಕುರೂಪಿಯಾಗುತ್ತಾಳೆ. ಇದರ ಪರಿಣಾಮವಾಗಿ ಕ್ಯಾಸಯ್ಯ ಇವಳನ್ನು ತನ್ನ ಮನೆಯೊಳಗೆ ಸೇರಿಸುವುದಿಲ್ಲ ಮತ್ತು ಪಾಪನಾಯಕನ ತಂದೆ ತಾಯಿಗಳನ್ನು ಗಳಗಂಟಗಾದಶೆಟ್ಟಿ ಬಂಧಿಸಿ ತನ್ನ ಸೆರೆಮನೆಯೊಳಗೆ ಹಾಕುತ್ತಾನೆ. ಕೊನೆಗೆ ಪಾಪನಾಯಕ ಪ್ರಬುದ್ಧಮಾನಕ್ಕೆ ಬಂದಾಗ ತನ್ನ ಭಾವ ಕ್ಯಾಸಯ್ಯನಿಗೆ ಬುದ್ಧಿ ಕಲಿಸಿ ಶರಣಾಗತನಾಗುವಂತೆ ಮಾಡುತ್ತಾನೆ. ಮಹಾಭಾರತದಲ್ಲಿ ಶ್ರೀಕೃಷ್ಣನು ಸಹ ತನ್ನ ಸೋದರ ಮಾವನಾದ ಕಂಸನನ್ನು ಕೊಲ್ಲುವ ಪ್ರಸಂಗವನ್ನು ಇಲ್ಲಿ ನೆನೆಪಿಸಿಕೊಳ್ಳಬಹುದಾಗಿದೆ. ಸಾಮಾನ್ಯವಾಗಿ ಬುಡಕಟ್ಟು ವೀರರಿಗೆ ತನ್ನ ಸೋದರ ಮಾವಂದಿರೆ ತೊಂದರೆ ಕೊಡುವುದು ಅವರಿಂದಲೇ ಕೊನೆಗೆ ಅವಸಾನವಾಗುವುದನ್ನು ಗಮನಿಸಬಹುದು.

ಜಗಳೂರಿನಲ್ಲಿ ಜಗಪತಿರಾಯನ ದಬ್ಬಾಳಿಕೆಗೆ ಶೋಷಣೆಗೆ ಅಲ್ಲಿನ ಸುತ್ತಮುತ್ತಲಿನ ಜನತೆ ತುತ್ತಾಗಿರುತ್ತಾರೆ. ಪಾಪನಾಯಕನು ಈ ವಿಷಯ ತಿಳಿದು ಜಗಳೂರಿಗೆ ಹೊಗುತ್ತಾನೆ. ನಂತರ ಅಲ್ಲಿನ ಜನರಿಗೆ ಪವಾಡ ಪುರುಷನಾಗುತ್ತಾನೆ. ಜಗಪತಿರಾಯನ ಮುನ್ನೂರು ಜಟ್ಟಿಗಳಲ್ಲಿ ಇನ್ನೂರೆಪ್ಪತ್ತು ಜಟ್ಟಿಗಳನ್ನು ತನ್ನ ಸೂರ್ಯನಂದನ ಕಠಾರಿಯಿಂದ ಸಂಹರಿಸುತ್ತಾನೆ. ಕೊನೆಗೆ ಜಗಪತಿರಾಯನು ಇವನ ಸಾಹಸ ಶೌರ್ಯವನ್ನು ನೋಡಿ ಶರಣಾಗತನಾದಂತೆ ನಟಿಸಿ ಇವನಿಗೆ ವಿಷಪ್ರಾಶನ ಮಾಡಿಸುತ್ತಾನೆ. ಇದರಲ್ಲೂ ಪಾಪನಾಯಕನು ಜಯಶೀಲನಾಗುತ್ತಾನೆ. ಕೊನೆಗೆ ಕೋಟೆಯ ಸುತ್ತಮುತ್ತಲೂ ನೆಟ್ಟಿದ ಕತ್ತಿಗಳಿಂದ ಪಾಪನಾಯಕನು ತನ್ನ ಮುಂಗಾಲುಗಳನ್ನು ಕಳೆದುಕೊಂಡು ಚೇತರಿಸಿಕೊಳ್ಳುತ್ತಿರುವಾಗ ಕುದುರೆಯ ಮೇಲೆ ಒಬ್ಬ ಸ್ತ್ರೀ ಬಂದು ಹೋರಾಡಲು ಆಹ್ವಾನಿಸುವಂತೆ ಭಾಸವಾಗುತ್ತದೆ. ಆಗ ಪಾಪನಾಯಕನು ಸ್ತ್ರೀ ಮೇಲೆ ಹೋರಾಡುವುದು ವೀರ ಪುರುಷನ ಲಕ್ಷಣವಲ್ಲ, ಎಂದು ಭೂದೇವಿಯಲ್ಲಿ ಐಕ್ಯನಾಗುತ್ತಾನೆ. ಈ ಸ್ಥಳದಲ್ಲಿಯೆ ಜಗಳೂರಜ್ಜನ ದೇವಾಲಯವನ್ನು ಕಾಣಬಹುದು.

ಪಾಪನಾಯಕನ ಬಗ್ಗೆ ಇರುವ ಧಾರ್ಮಿಕ ಆಚರಣೆಗಳನ್ನು ಗಮನಿಸಿದಾಗ ಈ ಬುಡಕಟ್ಟಿನವರ ಒಗ್ಗಟ್ಟನ್ನು ಮತ್ತು ಅವರ ಮೂಲ ಸಂಸ್ಕೃತಿಯ ಹೊಳವುಗಳನ್ನು ಕಾಣಬಹುದು. ಉದಾಹರಣೆಗೆ ಕಂಪಳದೇವರಹಟ್ಟಿಯಲ್ಲಿ ನಡೆಯುವ ಜಾತ್ರೆಯನ್ನು ನೋಡಿದಾಗ ಅಲ್ಲಿನ ಸುತ್ತಮುತ್ತಲಿನ ಜನರ ಸಹಬಾಳ್ವೆ ಸಹಕಾರ, ಹೊಂದಾಣಿಕೆಯ ಮನೋಭಾವವನ್ನು ಕಾಣಬಹುದು. ಏಕೆಂದರೆ ಇಲ್ಲಿನ ಮ್ಯಾಸರು ಜಾತ್ರೆಗೆ ಮುಂಚೆ ಒಂದೆಡೆ ಕೂತು ಈ ಜಾತ್ರೆಯ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದು ಮತ್ತು ಜಾತ್ರೆಯಲ್ಲಿ ಎಲ್ಲರೂ ಭಾಗವಹಿಸುವುದನ್ನು ನೋಡಬಹುದು. ಮತ್ತು ದವಸ ಧಾನ್ಯಗಳನ್ನು ಕರಿಕಂಬಳಿಯಲ್ಲಿ ಗಂಟುಕಟ್ಟಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಕಾಲುನಡಿಗೆಯಲ್ಲಿಯೇ ಬರುತ್ತಾರೆ. ನಂತರ ತಂದಂತಹ ಮೀಸಲನ್ನು ಒಟ್ಟಿಗೆ ಒಂದು ರಾಶಿಯಲ್ಲಿ ಸುರಿಯುತ್ತಾರೆ. ಅಲ್ಲದೇ ಸುತ್ತಮುತ್ತಲಿನ ಎಲ್ಲಾ ಕಟ್ಟೆಮನೆಗಳ ದೇವರ ಪೆಟ್ಟಿಗೆಗಳು ಮತ್ತು ದೇವರ ದನಗಳು ಒಂದೆಡೆ

ಸೇರುತ್ತವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬೇರೆ ಬೇರೆ ಆಗಿದ್ದರೂ ನಾವೆಲ್ಲಾ ಒಂದೇ ಎನ್ನುವ ಭಾವನೆ ಈ ಜನತೆಯಲ್ಲಿ ಕಂಡು ಬರುತ್ತವೆ. ಹೀಗೆ ಪಾಪನಾಯಕನ ಪವಾಡಗಳನ್ನು ಕಂಡಂತಹ ಜನರ ಮನದಲ್ಲಿ ಇಂದಿಗೂ ಜೀವಂತವಾಗಿ ಇರುವುದನ್ನು ಕಾಣುತ್ತೇವೆ.

ಬುಡಕಟ್ಟುಗಳು ತಮ್ಮ ಬುಡಕಟ್ಟು ಸ್ವಭಾವಗಳನ್ನು ನಿರಂತರವಾಗಿ ಆದರೆ ಸಮುದಾಯ ಸ್ಮೃತಿ ಕೋಶ ಅದನ್ನೊಂದು 'ಜಾತಿ' ಕಲ್ಪನೆಯಾಗಿ ಬಳಸಿಕೊಳ್ಳುತ್ತದೆ. ನಾಗರಿಕ ಸಮಾಜದ ವೃತ್ತಿ ಧರ್ಮಗಳಿಗೆ ಅನುಗುಣವಾಗಿ ಪಟ್ಟಣ ನಗರಗಳೊಂದಿಗೆ ಬೆರೆಯುವಾಗ ತಮ್ಮ ಊರು, ಧರ್ಮದ ಜನರೊಂದಿಗೆ ತಮ್ಮದೇ ಆದ ಆಚರಣೆಗಳನ್ನು ಆಚರಿಸಲು ಒಂದೆಡೆ ಸೇರುತ್ತಾರೆ.[೧]

ಯಾವುದೇ ಸಮುದಾಯ ತನ್ನ ಸಂಸ್ಕೃತಿಯ ಕೋಶದ ಒಳಗೆ ಕಾಲದ ಅನಿವಾರ್ಯತೆಯ ಫಲವಾಗಿ ಏರ್ಪಡುವ ಉಬ್ಬರ ಇಳಿತಗಳನ್ನು ಸಾವಧಾನವಾಗಿ ಗಮನಿಸುತ್ತಲೇ ಇರುತ್ತವೆ. ಬದಲಾಗುವ ಕಾಲಮಾನದ ಲಯಕ್ಕೆ ಅದು ತನ್ನನ್ನು ವಿಸ್ತರಿಸಿಕೊಳ್ಳುವ ಅಥವಾ ತನ್ನ ಸಂವೇದನೆಗಳನ್ನು ಆ ಬದಲಾದ ಲಯಕ್ಕೆ ಹೊಂದಿಕೊಳ್ಳುವ ಪ್ರಯತ್ನವನ್ನು ಸಮುದಾಯ ಯಾವತ್ತೂ ಜೀವಂತವಾಗಿಟ್ಟುಕೊಂಡಿರುತ್ತದೆ. ಮ್ಯಾಸಬೇಡ ಸಮುದಾಯ ಮಿಶ್ರ ಪ್ರಕ್ರಿಯೇಯ ಮೂಲಕ ಸಂವೇದಿಸಿದ್ದು ಗಮನಾರ್ಹ ಸಂಗತಿ. ಈ ಸ್ವೀಕರಣ ಮತ್ತು ಪ್ರತಿರೋಧಗಳು ಸಮುದಾಯವನ್ನು ಬದಲಾವಣೆಗೆ ಅರ್ಥಪೂರ್ಣವಾಗಿ ಅನ್ವಯಿಸುವ, ಬೆಳೆಸುವ, ಬೆಸೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ. ಸ್ವೀಕರಿಸುವ ಸಮುದಾಯ ಆಳದಲ್ಲಿನ ಚಾರಿತ್ರಿಕ ಹಸಿವು ಪ್ರತಿರೋಧಿಸುವಾಗ ಕಾಡುವ ಅನನ್ಯತೆಯ ಭಯ, ಇವೆರಡೂ ಒಂದು ಸಮುದಾಯದ ಸಂಸ್ಕೃತಿ ಕೋಶದ ಮಿಡಿತವನ್ನು ಒಂದು ಅರ್ಥಪೂರ್ಣ ಲಯಕ್ಕೆ ಹೊಂದಿಸಿದೆ. ಜಗಳೂರಜ್ಜ ಮ್ಯಾಸಬೇಡರಲ್ಲಿ ಪ್ರಭುತ್ವದ ಏಕಸ್ವಾಮ್ಯತೆಯನ್ನು ಪ್ರತಿರೋಧಿಸುವ ವ್ಯಕ್ತಿಯಾಗಿ ರೂಪಗೊಂಡಿದ್ದಾರೆ. ಇಂದು ಸಹ ಜಗಳೂರಜ್ಜನನ್ನು ಅನುಭಾವಿಗಳು ಮ್ಯಾಸಬೇಡ ಸಮುದಾಯದವರು ದೈವಪುರುಷ ನಾಗಿ ಪೂಜಿಸಲ್ಪಡುತ್ತಿದ್ದಾರೆ. ಜಗಳೂರಜ್ಜ ಭಯಂಕರವಾಗಿ ಯುದ್ಧಗಳನ್ನು ಮಾಡಿದವರಲ್ಲ. ಇವರದು ತಾತ್ವಿಕ ಹೋರಾಟ. ಸೋತ ಸಮುದಯಕ್ಕೆ ವೈಚಾರಿಕ ದೃಢತೆಯನ್ನು ಈ ಅನುಭಾವಿ ತಂದು ಕೊಟ್ಟರು.

ಮಧ್ಯಕಾಲೀನ ಕರ್ನಾಟಕದ ಶ್ರೀ ವೈಷ್ಣವ ಮತ ಪ್ರಚಾರದಾಳಿ ಈ ಬಗೆಯ ದೈವಗಳನ್ನು ಅನಾವತ್ತಾಗಿ ವೈಷ್ಣವೀಕರಣಕ್ಕೆ ರೂಪಾಂತರಿಸಿದೆ. ಏಕೆಂದರೆ ಬ್ರಾಹ್ಮಣರು ವೆಂಕಟೇಶ್ವರನ ಮೂಲ ರೂಪದಂತಿರುವ ಈ ಆದಿವಾಸಿ ಮತ್ತು ಕೆಳಜಾತಿಗಳ ವಿವಿಧ ದೇವತೆಗಳ ಮೂಲಕ ಈ ವೆಂಕಟೇಶ್ವರನ ಕಲ್ಪನೆಯನ್ನು ಗುರುತಿಸಬಹುದಾಗಿದೆ. ಇದಕ್ಕೆ ಕೇವಲ ಮೂರ್ತಿಶಾಸ್ತ್ರ ಮುಂತಾದ ರೂಢಿಗತ ಶಾಸ್ತ್ರಗಳು ಮಾತ್ರ ಪ್ರಮಾಣಗಳನ್ನು ಒದಗಿಸಲಾರವು. ಆದಿವಾಸಿ ಮತ್ತು ಕೆಳಜಾತಿಗಳ ಮೌಖಿಕ ಸಾಹಿತ್ಯ ಮತ್ತು ಆಚರಣೆಯ ವಿಧಿ ವಿಧಾನಗಳ ಮೂಲಕ ಒಂದು ತೀರ್ಮಾನಕ್ಕೆ ಬರಬೇಕೆಂದು ಕಾಣುತ್ತದೆ. ಏಕೆಂದರೆ

ತಿರುಪತಿ ತಿಮ್ಮಪ್ಪ ಆದಿವಾಸಿ ಮತ್ತು ಕೆಳಜಾತಿ ಸಮುದಾಯಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಪೂಜಿಸಲ್ಪಡುತ್ತಿದ್ದಾನೆ. ಅಲ್ಲದೇ ಮ್ಯಾಸಬೇಡರ ಸಾಂಸ್ಕೃತಿ ನಾಯಕ ಜಗಳೂರಜ್ಜನಿಗೂ ಮತ್ತು ತಿರುಪತಿ ವೆಂಕಟೇಶ್ವರನಿಗೂ ನಡೆದಿರುವ ವಾಗ್ವಾದ ಮ್ಯಾಸಬೇಡ ಜನಪದ ಸಾಹಿತ್ಯದಲ್ಲಿ ಪ್ರಖ್ಯಾತವಾದುದು. ಮಂಟೇಸ್ವಾಮಿ ಕಲ್ಯಾಣದಲ್ಲಿ ಬಸವಣ್ಣನನ್ನು ಮುಖಾಮುಖಿಯಾಗುವ ರೀತಿಯಲ್ಲಿಯೇ ಜಗಳೂರಜ್ಜ ವೆಂಕಟೇಶ್ವರನನ್ನು ಮುಖಾಮುಖಿ ಯಾಗುತ್ತಾನೆ. ಜಗಳೂರಜ್ಜ ದನ ಕಾಯುವ ಹುಡುಗನಾಗಿದ್ದಾಗಲೇ ತಿರುಪತಿಗೆ ಹೋಗಿ ವೆಂಕಟೇಶ್ವರನನ್ನು ಭೇಟಿಯಾಗಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದಾಗ ಜನರಿಂದ ಗೇಲಿಗೊಳಗಾಗುತ್ತಾನೆ. ಆದರೂ ಹಟಕ್ಕೆ ಬಿದ್ದು ತಿರುಪತಿಗೆ ಹೊರಡುತ್ತಾನೆ. ದಾರಿಯಲ್ಲಿ ಅವನಿಗೂ ವೆಂಕಟೇಶ್ವರನ ಭಕ್ತರಾದ ಗೊಲ್ಲರಿಗೂ ಜಗಳವಾಗುತ್ತದೆ. ಗೊಲ್ಲರ ಢಾಂಬಿಕ ಭಕ್ತಿಯನ್ನು ಅವರಿಗೆ ಮನವರಿಕೆ ಮಾಡಿಕೊಡುವುದರಲ್ಲಿ ಜಗಳೂರಜ್ಜ ಯಶಸ್ವಿಯಾಗುತ್ತಾನೆ. ಕೊನೆಗೂ ತಿರುಪತಿಯನ್ನು ಅವನು ತಲುಪಿದರೂ ವೆಂಕಟೇಶ್ವರನನ್ನು ಭೇಟಿಯಾಗುವುದಿಲ್ಲ. ವೆಂಕಟೇಶ್ವರನೇ ಜಗಳೂರಜ್ಜನಲ್ಲಿಗೆ ಬಂದು ದರ್ಶನ ಕೊಡುತ್ತಾನೆ. ಜಗಳೂರಜ್ಜನ ತಾತ್ವಿಕತೆ ಏನೆಂದರೆ ಒಟ್ಟಾರೆ ಡಾಂಭಿಕ ಭಕ್ತಿಯನ್ನು ಒಪ್ಪುವುದಿಲ್ಲ. ಅನ್ಯಾಯದ ವಿರುದ್ಧ ಹೋರಾಡುವುದು ಈತನ ಮುಖ್ಯ ಉದ್ದೇಶವಾಗಿರುತ್ತದೆ.

**ಟಿಪ್ಪಣಿಗಳು**

೧. ಬುಡಕಟ್ಟು ಅಧ್ಯಯನ ಪತ್ರಿಕೆ–೧, ಪು.ಸಂ – ೧೪

೨. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪು.ಸಂ – ೧–೬೩, ೬೩–೬೪, ೬–೩

೩. ಮ್ಯಾಸಬೇಡರ ಕಥನಗಳು, ಪು.ಸಂ– ೧೨–೧೩

೪. ಆದಿವಾಸಿ, ಪು.ಸಂ– ೩೯

# ಅಧ್ಯಾಯ ಐದು

## ವರ್ತಮಾನದಲ್ಲಿ ಮ್ಯಾಸಬೇಡರು ಮತ್ತು ಜಗಳೂರು ಪಾಪನಾಯಕ

ಮ್ಯಾಸಬೆಡರ ಸಮುದಾಯ ತನ್ನದೇ ಆದ ಸಂಸ್ಕೃತಿಯನ್ನೊಳಗೊಂಡಿದೆ. ಬುಡಕಟ್ಟುಗಳ ಸಂಸ್ಕೃತಿಯಲ್ಲಿ ವಿಶಿಷ್ಟವಾಗಿ ಕಂಡುಬರುವ ಈ ಸಮುದಾಯದ ಕಲೆ, ಆಚರಣೆ, ಸಂಪ್ರದಾಯ ಬದುಕಿನ ರೀತಿ ನೀತಿ ವಿಭಿನ್ನವಾಗಿವೆ. ಇವರ ಹೆಸರೇ ಸೂಚಿಸುವಂತೆ ಬೇಟೆಯಾಡುವ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದವರು. ಇದರ ಜೊತೆಗೆ ಅನೇಕ ಉಪವೃತ್ತಿಗಳನ್ನು ಅನುಸರಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಶ್ರೀಶೈಲ ಮೂಲದಿಂದ ಬಂದಂತಹ ಈ ಜನಾಂಗ ಅಲೆಮಾರಿಯಾಗಿ ಜೀವನ ಸಾಗಿಸುತ್ತಿತ್ತು. ಬದಲಾದ ಸಂದರ್ಭದಲ್ಲಿ ಒಂದು ಕಡೆ ನೆಲೆಸಿ ವಾಸಿಸತೊಡಗಿತು. ಆಗ ಅವರ ಜೀವನ ಕ್ರಮಕ್ಕೆ ಒಂದು ದೈವ ಬೇಕಿತ್ತು. ಒಂದು ಧರ್ಮದ ಅವಶ್ಯಕತೆಯಿತ್ತು. ನಿಸರ್ಗದಲ್ಲಿ ವಾಸಿಸುವ ಇವರು ನಿಸರ್ಗವನ್ನೇ ಪೂಜಿಸುತ್ತಾ ತಮ್ಮದೇ ಆದ ಒಂದು ದೈವವನ್ನು ಕಂಡುಕೊಂಡರು. ಅದಕ್ಕೆ ತಮ್ಮದೇ ಆದ ನಿಯಮಾವಳಿಗಳನ್ನು ಕೆಲವು ಪವಾಡಗಳನ್ನು ರಚಿಸಿಕೊಂಡರು.

ಮ್ಯಾಸಬೇಡರ ದೇವರ ಗುಡಿಗಳು "ಗುಡಿಸಲು" ಇಂದಿಗೂ ಸಹ ಇರುವುದನ್ನು ಕಾಣಬಹುದು. ಆಧುನಿಕತೆಯಿಂದಾಗಿ ದೊಡ್ಡ ಗುಡಿಗಳನ್ನು ಕಟ್ಟಿಸಿದರೆ ಪಕ್ಕದಲ್ಲಿ ಗುಡಿಸಲು ಇರುವುದನ್ನು ಇಂದಿಗೂ ಸಹ ನೋಡಬಹುದು. ಗುಡಿಸಲುಗಳನ್ನು ಲಕ್ಕಿಬರಲುಗಳಿಂದ ಕಟ್ಟಿರುತ್ತಾರೆ. ದೇವಸ್ಥಾನದ ಮೇಲೆ ಹುಲ್ಲನ್ನು ಹೊದಿಸಿರುತ್ತಾರೆ. 'ನೆರೆಕೆ ಮನೆ'ಯೇ ಈ ದೇವರ ಗುಡಿಸಲುಗಳಾಗಿರುತ್ತವೆ. ಇವು ಪವಿತ್ರತೆಯ ತಾಣವಾಗಿರುತ್ತವೆ. ಇಲ್ಲಿ ಮಡಿವಂತಿಕೆಯನ್ನು ಕಾಯ್ದುಕೊಳ್ಳಲಾಗುತ್ತದೆ. ಈ ಜನಾಂಗದವರು ತಮ್ಮ ದಿನ ನಿತ್ಯದ ಬದುಕಿನಲ್ಲಿ ಸಮಾಜದಲ್ಲಿ ಯಾವುದೇ ಸಮಸ್ಯೆ ಬಂದರೂ ಈ ಪೋಳಿ ಗುಡಿಗಳು ಅಥವಾ ಪೋಳಿ ಕಟ್ಟೆಗಳು

(ಪಂಚಾಯಿತಿ ಕಟ್ಟೆ) ನ್ಯಾಯ ತೀರ್ಮಾನ ಸ್ಥಾನವಾಗಿರುತ್ತವೆ. ಕೆಲವೊಂದು ದೇವಸ್ಥಾನಗಳು ವೃತ್ತಾಕಾರದಲ್ಲಿ ಗೋಡೆ ಕಟ್ಟಿ ಅದರ ಮೇಲೆ ಬಾದಿಹುಲ್ಲಿನಿಂದ ಛಾವಣಿ ಹೊದಿಸಿರುತ್ತಾರೆ. ಇವು ಸಾಮಾನ್ಯವಾಗಿ ಒಂದು ಕಂಬದ ಮನೆಗಳಾಗಿರುತ್ತವೆ. ಇದನ್ನು "ಪೋಳಿಗುಡಿ" ಎಂದು ಕರೆಯುತ್ತಾರೆ. ತಲೆಮಾರಿನಿಂದ ತಲೆಮಾರಿಗೆ ಪಾರಂಪರಿಕವಾಗಿ ಬೆಳೆದು ಬಂದ ನಂಬಿಕೆ. ರೂಢಿ. ಪದ್ಧತಿ, ಸಂಪ್ರದಾಯಗಳನ್ನು ಬೇಡ ಸಮುದಾಯವು ಗೌರವಿಸು ವುದರ ಜೊತೆಗೆ ಆರಾದಿಸುತ್ತಾರೆ. ಮ್ಯಾಸಬೇಡ

ಸಮುದಾಯವು ಜಗಳೂರಪ್ಪನೊಂದಿಗೆ ತಾದಾತ್ಮ್ಯ ಸಂಬಂಧವನ್ನು ಬೆಸೆದುಕೊಂಡಿದ್ದಾರೆ. ನೂತನ ವಿಧಾನಗಳನ್ನು ಹಂತ ಹಂತವಾಗಿ ಬೇರೆ ವಿಧಾನಗಳಿಗೆ ಅನುಸರಿಸದೇ ವರ್ತಮಾನದಲ್ಲಿ ತಮ್ಮ ಮೂಲ ಕಸುಬನ್ನು ಬಿಟ್ಟುಕೊಡುತ್ತಿದ್ದಾರೆ. ಎಂಬುದನ್ನು ನೋಡಬಹುದು. ಆಧುನಿಕತೆಯಿಂದ ಸಮುದಾಯಗಳು ಕಾಲ ಪ್ರವಾಹದ ಜೊತೆಗೆ ಹರಿದು ಬಂದಾಗ ಅದರ ಬದಲಾವಣೆ ಸಹಜ. ಕ್ಷೇತ್ರಕಾರ್ಯದಲ್ಲಿ ನಾನು ಗಮನಿಸಿದಂತೆ ಅವರ ಆಚಾರ ವಿಚಾರ ಸಂಪ್ರದಾಯಗಳು ಸಮುದಾಯದ ಚಿಕ್ಕಪುಟ್ಟಗಳಲ್ಲವು ವರ್ತಮಾನದ ಬದುಕಿಗೆ ಮುಖಾ ಮುಖಿಯಾಗುತ್ತಿರುವುದು ಕಂಡು ಬರುತ್ತದೆ.

ಸಮಾಜ ಪರಿವರ್ತನೆಯ ಪ್ರವಾಹಕ್ಕೆ ಮಾನವನ ಆಸೆ ಆಕಾಂಕ್ಷೆಗಳು ಬಗ್ಗಬಹುದು. ಬಗ್ಗದೆ ಪೂರಕವಾಗಿರಬಹುದು. ಆದರೆ ಆಧುನಿಕ ಸಮಾಜಗಳ ಜೊತೆಗೆ ಯಾವುದೇ ತರಹದ ಸಂಬಂಧ ಬೆಳೆಸಿಲ್ಲದ ಬುಡಕಟ್ಟುಗಳ ಸ್ಥಿತಿ ಹಳೆಯ ಸಂಪ್ರದಾಯಗಳಿಗೆ ಹೊಂದಿಕೊಳ್ಳುತ್ತದೆ. ನೂತನ ಆವಿಷ್ಕಾರಗಳಿಗೆ ಒಲಿಯಾಗದೇ ಅತಂತ್ರ ಸ್ಥಿತಿಯಲ್ಲಿರುತ್ತಾರೆ. ಭೂಮಿಯ ಮೇಲೆ ವಾಸಿಸುವ ಪ್ರತಿಯೊಂದು ಜೀವಿ ಸಂಕುಲದಲ್ಲಿ ಸಾಮಾಜಿಕ ಬದಲಾವಣೆ ಆಗುತ್ತದೆ. ಈ ಬದಲಾವಣೆ ಹೆಚ್ಚಾಗಿ ಆರ್ಥಿಕತೆಯನ್ನು ಪ್ರತಿನಿಧಿಸುತ್ತದೆ.

ಇಂದು ವ್ಯಾಸಬೇಡ ಸಮುದಾಯವು ಬದಲಾವಣೆಯನ್ನು ಬಯಸುತ್ತದೆ. ಈ ಸಮುದಾಯವು ಹೆಚ್ಚಾಗಿ ಕೃಷಿಯನ್ನೇ ಅವಲಂಬಿಸಿ ಜೀವನ ನಡೆಸುತ್ತಿದೆ. ಕೃಷಿಗಾಗಿ ಪಂಪ್ ಸೆಟ್ಟು, ನೀರಾವರಿಯೋಜನೆ, ತುಂತುರು ನೀರಾವರಿ ಯೋಜನೆ ಹಾಗೂ ರಾಸಾಯನಿಕ ಗೊಬ್ಬರಗಳಿಂದ ಅವರ ಆಹಾರೋತ್ಪನ್ನಗಳು ವಿಸ್ತೃತವಾಗುತ್ತಿದೆ. ಅವರು ವಾಸಿಸುತ್ತಿರುವ ಗ್ರಾಮಗಳ ರೀತಿ ನೀತಿಗಳಲ್ಲಿ ಸಂಪ್ರದಾಯಗಳಲ್ಲಿ ವಿಶೇಷ ಬದಲಾವಣೆ ಕಂಡು ಬರುತ್ತಿದೆ. ಜೈವಿಕವಾಗಿ ಹುಟ್ಟು, ವಿವಾಹ. ಲೈಂಗಿಕತೆ ಮತ್ತು ಧಾರ್ಮಿಕ ವಿಚಾರಗಳಲ್ಲಿ ಈ ಪ್ರಭಾವವನ್ನು ಕಾಣುತ್ತೇವೆ. ಇದೇ ರೀತಿಯಲ್ಲಿ  ಬುಡಕಟ್ಟು ಸಮುದಾಯಗಳು ಇಂದು ಸದಾ ಪರಿವರ್ತನೆಗೊಳ್ಳುತ್ತಿವೆ.

ವ್ಯಾಸಬೇಡರು ಪರಂಪರೆಯನ್ನು ಏಕ ಮುಖವಾಗಿ ನೋಡುವುದೇ ಹೆಚ್ಚು. ಇಲ್ಲಿ ಸಾಮಾಜಿಕ ಪರಿವರ್ತನೆಯಾದರೆ ಬುಡಕಟ್ಟು ಸಮುದಾಯಗಳಲ್ಲಿ ತಲೆಮಾರುಗಳಿಂದ ಬೇರೂರಿ ಬಂದಿದ್ದ ರೂಢಿ. ಸಂಪ್ರದಾಯ, ಸಂಸ್ಕೃತಿಗಳಲ್ಲಿರುವ ಆಮೂಲಾಗ್ರ ಪರಿವರ್ತನೆ ಬಯಸಬಹುದು. ಇಡೀ ಸಮಾಜದ ಬೇರುಗಳನ್ನು ಅಲುಗಾಡಿಸುವ ಕವಲುಗಳು ಹಲವು. ಬೇಡ ಸಮುದಾಯವು ರಾಜಕೀಯ. ಆರ್ಥಿಕ. ಸಾಮಾಜಿಕ, ಪರಿವರ್ತನೆಗಳ ಮೂಲಕ ಆಧುನಿಕ ಬದುಕಿಗೆ ತೀವ್ರವಾದ ಪರಿವರ್ತನೆಗೆ ನಾಂದಿ ಹಾಡಿದೆ. ಬೇಡರ ಪರಂಪರಾನುಗತವಾದ ಸಾಮಾಜಿಕ ಸ್ಥಿತಿಗತಿಗಳು ಪರಿವರ್ತನೆಯಾಗುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿದೆ.

ಕರ್ನಾಟಕದಲ್ಲಿ ಸುಮಾರು ೬೫ ಲಕ್ಷಕ್ಕೂ ಹೆಚ್ಚಿರುವ ಬೇಡರು(ನಾಯಕರು) ವಿವಿಧ ರೀತಿಯ ವೃತ್ತಿಗಳಲ್ಲಿ ತೊಡಗಿದ್ದಾರೆ. ಇತ್ತೀಚೆಗೆ ಬೇಟೆ,ಪಶುಪಾಲನೆ ಕಡಿಮೆಯಾಗಿ ಕೃಷಿ, ವ್ಯಾಪಾರ, ಕೂಲಿ, ಮೊದಲಾದ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬಳ್ಳಾರಿ, ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿರುವ ಚಳ್ಳಕೆರೆ, ಜಗಳೂರು, ದಾವಣಗೆರೆ, ಮೊಳಕಾಲ್ಮೂರು, ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿಯ ಜನರ ವೃತ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪರಿವರ್ತನೆಯಾಗಿರುವುದು ಕಂಡುಬರುತ್ತದೆ. ಮತ್ತು ಈ ಭಾಗದ ಹಳ್ಳಿ, ಗ್ರಾಮ, ಪಟ್ಟಣಗಳಲ್ಲಿ ಮ್ಯಾಸಬೇಡರ ಜನಸಂಖ್ಯೆ ಅಧಿಕವಾಗಿದೆ. ಈ ಬೇಡರು ಬೇಟೆಯಾಡುವುದನ್ನು ಹಾಗೂ ಪಶುಪಾಲನೆಯನ್ನು ತೊರೆದು ಕೃಷಿಯಲ್ಲಿ ತೊಡಗಿದ್ದಾರೆ. ಆದರೆ ಇಂದಿಗೂ ಇವರಲ್ಲಿ ವಸತಿ, ನೀರು, ಆಹಾರ ಸಮಸ್ಯೆ ಜೀವಂತವಾಗಿದೆ. ಬಡತನದಿಂದ ಕೂಲಿ ಮಾಡುವುದು ವಲಸೆ ಹೋಗಿ ಜೀವಿಸುವ ಪರಂಪರೆ ಹೆಚ್ಚಾಗತೊಡಗಿದೆ. ಕಾಡು ಕಡಿದು ಅದನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿಕೊಳ್ಳುವಾಗ ಅವರ ಮೇಲೆ ಅನೇಕ ಪರಿಣಾಮಗಳಾಗಿವೆ. ಸಮುದಾಯ ಮತ್ತು ಸರ್ಕಾರದ ನಡುವೆ ಭೂವಿವಾದಗಳು ಹುಟ್ಟಿಕೊಂಡಿವೆ. ಬ್ರಿಟೀಷರ ಕಾಲದಲ್ಲಿ ಅರಣ್ಯದಲ್ಲಿರುವ ಮರಗಿಡಗಳನ್ನು ಮನೆಯ ಉಪಯೋಗಕ್ಕೆಂದು ಕಡಿಯಬೇಕಾದರೆ, ತಹಸೀಲ್ದಾರರಿಂದ ಶಿಫಾರಸ್ಸು ಪತ್ರ ಬರೆಸಿಕೊಂಡು, ಫಾರೆಸ್ಟ್ ಆಫಿಸರ್‌ನ್ನು ಕಂಡು ಮನೆಗೆ ಬೇಕಾದ ಮರ ಕತ್ತರಿಸಿಕೊಳ್ಳಬೇಕಾಗಿತ್ತೆಂದು ಹಳ್ಳಿಯವರು ತಿಳಿಸುತ್ತಾರೆ. ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಅರಣ್ಯದಲ್ಲಿ ಮೇಲಾಧಿಕಾರಿ ಅನುಮತಿ ಕೊಟ್ಟ ಎರಡು ದಿನಗಳೊಳಗೆ ಮನೆಕಟ್ಟಲು ಮರ ಹುಡುಕಿ ಕಡಿದುಕೊಳ್ಳಬೇಕಾಗುತ್ತಿತ್ತು. ಇದು ಅಧಿಕಾರಿಗಳು ಮತ್ತು ಫಲಾನುಭವಿಗಳ ನಡುವೆ ಏರ್ಪಟ್ಟ ಒಪ್ಪಂದದಂತಿರುತ್ತಿತ್ತು. ಈಗ ಅರಣ್ಯದೊಳಗಿನ ಯಾವ ಮರ ಗಿಡಗಳನ್ನು ಮುಟ್ಟುವಚಿತಿಲ್ಲ. ಇಂದು ಬೇಡರು ವ್ಯವಸಾಯದ ಜೊತೆಗೆ ಪಶುಪಾಲನೆಯ ಮೂಲಕ ಆರ್ಥಿಕವಾಗಿ ಮುನ್ನಡೆ ಸಾಧಿಸುತ್ತಿದ್ದಾರೆ. ಉತ್ತಮ ಕೃಷಿ ಹಾಗೂ ಹೈನುಗಾರಿಕೆಯಿಂದ ನೆಮ್ಮದಿಯ ಜೀವನ ನಡೆಸುವವರು ಕಂಡು ಬರುತ್ತಿದ್ದಾರೆ. ಬೇಡರ ಮಕ್ಕಳು ತಂದೆ-ತಾಯಿಗಳ ಅಲಕ್ಷ್ಯದಿಂದ ಮತ್ತು ದುಡಿದು ತಿನ್ನುವ ಮನೋಭಾವದಿಂದ ವಿದ್ಯಾಭ್ಯಾಸದಿಂದ ವಂಚಿತರಾಗಿ ಕೂಲಿ, ಕೃಷಿ ಮಾಡುವುದು ಅಥವಾ ದನ ಕಾಯುವುದು. ಕುರಿ ಕಾಯುವುದು, ಕೈಗಾರಿಕ ನಗರಗಳಿಗೆ ವಲಸೆ ಹೋಗುವುದು. ಕಂಡು ಬರುತ್ತದೆ. ಹೆಂಗಸರು ಮನೆಯ ಕಾರ್ಯ ನಿರ್ವಹಿಸುವುದರ ಜೊತೆಗೆ ಹೊಲದ ಕೆಲಸದಲ್ಲಿ ಭಾಗಿಯಾಗುತ್ತಾರೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ. ಮೊಳಕಾಲ್ಮುರು ಮತ್ತು ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕುಗಳಲ್ಲದೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಹಟ್ಟಿಗಳಲ್ಲಿ ಮ್ಯಾಸಬೇಡರ ಸ್ಥಿತಿ ಅತಿ ಶೋಚನೀಯವಾಗಿದೆ. ಇವರಿಗೆ ತೋಟ, ನೀರಾವರಿ, ಇತರ ಸೌಲಭ್ಯಗಳಲ್ಲಿ ಕೊರತೆ ಕಂಡು ಬರುತ್ತದೆ.

ವರ್ತಮಾನದಲ್ಲಿ ಹಟ್ಟಿ (Hamlet)ಗಳಲ್ಲಿರುವ ಬೇಡರು ಆಧುನಿಕತೆಯತ್ತ ಸಾಗಿದ್ದಾರೆ. ಆದರೆ ಹಟ್ಟಿಗಳಲ್ಲಿಯ ವಸತಿ ಸೌಲಭ್ಯಕ್ಕೆ ಆಧುನಿಕತೆ ಸ್ಪಷ್ಟವಾಗಿಲ್ಲ, ರಸ್ತೆ, ಚರಂಡಿ ಬೀದಿ ದೀಪಗಳ ವ್ಯವಸ್ಥೆ

ಕಂಡು ಬರುವುದಿಲ್ಲ. ರಸ್ತೆಗಳಿಲ್ಲದೆ ಕತ್ತಲೆಯಲ್ಲಿಯೂ ಬದುಕುವ ಸ್ಥಿತಿ ಇವರದ್ದಾಗಿದೆ. ಕೆಲವರು ಸರ್ಕಾರದ ಭಾಗ್ಯಜ್ಯೋತಿ, ಗಂಗಾಕಲ್ಯಾಣ, ಆಶ್ರಯ ಯೋಜನೆಗಳ ಫಲ ಪಡೆಯುತ್ತಿದ್ದಾರೆ. ವ್ಯವಸಾಯ ಮತ್ತು ಪಶುಪಾಲನೆಯ ಜೊತೆಗೆ ತಮ್ಮ ಪ್ರಾಚೀನ ವೃತ್ತಿಯಾದ ಬೇಟೆಯನ್ನು ಇವರಲ್ಲಿ ಕಾಣುತ್ತೇವೆ. ಹಟ್ಟಿಗಳು ಇಂದು ಗ್ರಾಮಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಸ್ಥಿತ್ಯಂತರಗೊಳ್ಳುತ್ತಿರುವ ಬುಡಕಟ್ಟು ಸಮುದಾಯಗಳು ಆಹಾರಕ್ಕಾಗಿ ಹಾತೊರೆದಂತೆ ಶಿಕ್ಷಣಕ್ಕೆ ಪ್ರಯತ್ನಿಸಿದ್ದು ಅನೇಕ ವರ್ಷಗಳ ತರುವಾಯ, ವರ್ಣಾಶ್ರಮ ಪದ್ಧತಿಯಲ್ಲಿ ಶಿಕ್ಷಣದಿಂದ ವಂಚಿತರಾದ ಶೂದ್ರರು ತಮ್ಮದೇ ಆದ ಪರಂಪರಾನುಗತವಾದ ಜ್ಞಾನ ಮೌಲ್ಯಗಳ ಮೂಲಕ ಬದುಕು ರೂಢಿಸಿಕೊಂಡಿದ್ದರು. ಇಂದಿನ ಬೇಡರ ಬದುಕು ಇತರರಿಗಿಂತ ಭಿನ್ನವಾಗಿಲ್ಲ ವಾದರೂ ದುಡಿದು ತಿನ್ನುವ ಸಾಹಸಿಗಳು ಮತ್ತು ಕೂಲಿಯಿಂದಲೇ ಬದುಕುವ ಕುಶಾಲಮತಿ ಗಳಾಗಿದ್ದಾರೆ. ಸರಿಸಮಾನ ಕೂಲಿಕಾರರಾಗಿ ಕೆಲಸ ಮಾಡಲಿಚ್ಛಿಸುತ್ತಾರೆ. ಜೀತದಾಳುಗಳಾಗಿರುವವರ ಬದುಕು ಜಟಿಲಗೊಂಡಿದೆ.

ಜಗಳೂರುಜ್ಜನನ್ನು ಆರಾಧನೆ ಮಾಡುತ್ತಿರುವ ಮ್ಯಾಸಬೇಡರನ್ನು ಇತರೆ ಸಮುದಾಯದವರಿಗೆ ಹೋಲಿಸಿದರೆ ಇವರು ಇತರರಿಗಿಂತ ಭಿನ್ನವಾಗಿರುವುದು ಕಂಡು ಬರುತ್ತದೆ. ಇವರ ಜೀವನದಲ್ಲಿ ಅನೇಕ ವ್ಯತ್ಯಾಸಗಳಾಗಿವೆ. ಮನೆ ನಿರ್ಮಾಣ, ಮುಂಗಾರಿನ ಬೆಳೆಯುವ ಫಸಲು, ಪಶುಪಾಲನೆ, ವ್ಯಾಪಾರ, ಹಬ್ಬಹರಿದಿನಗಳಲ್ಲಿ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿಯ ಅಭಿವೃದ್ಧಿ ಹಾಗೂ ಬದಲಾವಣೆಗಳನ್ನು ನೋಡುತ್ತೇವೆ. ಹಳೆಯ ಪದ್ಧತಿಯನ್ನು ಒಪ್ಪುವುದು, ತಿರಸ್ಕರಿಸುವುದು ಅಲ್ಲಲ್ಲಿ ಮೈಲುಗಲ್ಲುಗಳಾಗಿದ್ದು, ನಾಗರಿಕತೆ ಸುಳಿಗೆ ಬೇಡರು ಪಾದಾರ್ಪಣೆ ಮಾಡಿದ್ದು ಪರಿವರ್ತನೆಗೆ ನಾಂದಿಯಾಗಿದೆ. ಪರಂಪರಾನುಗತವಾಗಿ ಸಾಗಿ ಬಂದ ನಂಬಿಕೆ ರೂಢಿ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಇವರು ಗಮನ ಸೆಳೆದಿದ್ದಾರೆ. ಪಿತೃಪ್ರಧಾನ ಪರಂಪರೆಯಲ್ಲಿಯೇ ಮುಂದುವರೆದಿದ್ದಾರೆ. ಮ್ಯಾಸಬೇಡರು ಹಿಂದಿನ ತಲೆಮಾರಿನವರು ಬಿಟ್ಟು ಹೋದ ಮೌಲ್ಯಗಳನ್ನು ಉಳಿಸಿಕೊಂಡು ಆಧುನೀಕತೆಗೆ ಮುಖಾಮುಖಿಯಾಗುತ್ತಿರುವುದನ್ನು ಅಲ್ಲಲ್ಲಿ ಕಾಣುತ್ತೇವೆ.

ಆರಂಭದ ಕಾಲದಲ್ಲಿ ಬೇಡ ಸಮುದಾಯ ಬೇಟೆ ಮತ್ತು ಪಶುಪಾಲನೆಗಾಗಿ ಪ್ರದೇಶದಿಂದ ಪ್ರದೇಶಕ್ಕೆ ನೀರು ಮತ್ತು ಆಹಾರಕ್ಕೆ ವಲಸೆ ಹೋಗುವುದು ಸಾಮಾನ್ಯವಾಗಿತ್ತು. ಅಲ್ಲದೇ ಇವರು ನಾನಾ ತರದ ಪ್ರವೃತ್ತಿಗಳಲ್ಲಿ ನಿರತರಾಗಿದ್ದರು. ಉತ್ತಮ ಜೀವನಕ್ಕಾಗಿ ಹಂಬಲಿಸುವವನು ವಲಸೆಗೆ ಇಚ್ಛಿಸುತ್ತಾನೆ. ವಲಸೆಗೆ ಗುರಿ–ಉದ್ದೇಶ ಮತ್ತು ಪ್ರೇರಾಣಾಂಶಗಳಿವೆ. ಮಾನವನ ಚರಿತ್ರೆಯುದ್ದಕ್ಕೂ ವಲಸೆಗಳು ಸಹಸ್ರಾರು ರೀತಿಯಲ್ಲಿರುವ ಹುಟ್ಟಿನಿಂದ ಸಾವಿನವರಗಿನೆ ನಡುವಿನ ಅವಧಿಯಲ್ಲಿಯೂ ಮಾನವ ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಲು ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಚಟುವಟಿಕೆಗಳೇ ಕಾರಣವಾಗುತ್ತವೆ. ವಲಸೆ ಹೋದ ವಕ್ತೃಗಳು ಅಲ್ಲಿಯ ಪರಿಸ್ಥಿತಿಗೆ ಹೊಸ ಪರಿಸರಕ್ಕೆ

ಕ್ರಮೇಣ ಒಗ್ಗಿಕೊಳ್ಳುತ್ತಾರೆ. ಈ ವಲಸೆ ಎನ್ನುವುದು ಕೇವಲ ಬುಡಕಟ್ಟುಗಳಲ್ಲಿ ಅಥವಾ ಬೇಡರಲ್ಲಿ ಮಾತ್ರವಲ್ಲದೇ ಅನೇಕ ಸಮುದಾಯಗಳಲ್ಲಿ ಪ್ರಧಾನವಾಗಿ ಕಂಡು ಬರುತ್ತದೆ. ಇತ್ತೀಚಿನ ದಿನಗಳಲ್ಲಿಯೂ ಹೊಸ ಕಾಡುನಾಶ, ಅರಣ್ಯ ನೀತಿ ನಗರೀಕರಣ, ಆಧುನೀಕರಣ ಮತ್ತು ಕೈಗಾರಿಕೆ ನೀತಿಯ ಕಾರಣದಿಂದ ಬೇಡರು ಅರಣ್ಯ ಮತ್ತು ಗ್ರಾಮಗಳನ್ನು ತ್ಯಜಿಸಿ ನಗರಗಳಿಗೆ ವಲಸೆ ಹೋಗುವದು ಕಂಡು ಬರುತ್ತದೆ.

ಸಮುದಾಯಗಳ ವಲಸೆ ಇತ್ತೀಚಿನದಲ್ಲ. ಪ್ರಾಚೀನಕಾಲದಿಂದಲೂ ಇದು ನಡೆದು ಬಂದಿದೆ ಎಂಬುದಕ್ಕೆ ಅನೇಕ ನಿದರ್ಶನಗಳಿವೆ. ಕರ್ನಾಟಕದ ಅರಸರು ನೆರೆಯ ರಾಜ್ಯಗಳೊಡನೆ ಯುದ್ಧ ಮಾಡಿ ಜಯಿಸಿ ಬರುವಾಗ ಅವರೊಡನೆ ಅನೇಕ ಸಮುದಾಯಗಳು ಹಿಂಬಾಲಿಸಿ ಬರುತ್ತಿದ್ದನು. ವಲಸೆ ಬಂದವರು ಸಹ ಸೈನಿಕರಾಗಿ ಸೇವೆ ಸಲ್ಲಿಸಿರುವ ಉದಾಹರಣೆಗಳಿವೆ. ಆಂಧ್ರದಿಂದ ವಿಜಯನಗರದ ಅರಸರ ಕಾಲಕ್ಕೆ ಬೇಡರು ಸೈನಿಕರಾಗಿದ್ದು ಸತ್ಯ. ಒಂದು ಸಮುದಾಯದಲ್ಲಿ ಶಿಕ್ಷಣದ ಮಟ್ಟ ಹೆಚ್ಚಿದಂತೆಲ್ಲಾ ಸಮಾಜ ಎಲ್ಲಾ ವಿಧದಲ್ಲಿಯೂ ಬದಲಾಗಲು ಸಾಧ್ಯ.

ಪಾಪನಯಕನ ಬಗ್ಗೆ ಇರುವ ಧಾರ್ಮಿಕ ಆಚರಣೆಗಳನ್ನು ಗಮನಿಸಿದಾಗ ಈ ಬುಡಕಟ್ಟಿನವರ ಒಗ್ಗಟ್ಟನ್ನು ಮತ್ತು ವರ್ತಮಾನದಲ್ಲಿ ಜಗಳೂರು ಪಾಪನಾಯಕನನ್ನು ಯಾವ ರೀತಿ ಕಾಣುತ್ತಾರೆಂಬುದನ್ನು ಕಾಣಬಹುದು. ಇವರು ಸಾಮೂಹಿಕವಾಗಿ ಮಾಡುವ ಕೆಲವು ಕೆಲಸ ಕಾರ್ಯಗಳನ್ನು ನೋಡಬಹುದು. ಇವರ ಮೂಲ ಸಂಸ್ಕೃತಿಯ ಹೊಳವುಗಳನ್ನು ಕಾಣಬಹುದು. ಉದಾಹರಣೆಗೆ ಕಂಪಳ ದೇವರ ಹಟ್ಟಿಯಲ್ಲಿ ನಡೆಯುವ ಜಾತ್ರೆಯನ್ನು ನೋಡಿದಾಗ ಅಲ್ಲಿನ ಸುತ್ತ ಮುತ್ತಲಿನ ಜನರ ಸಹಬಾಳ್ವೆ, ಸಹಕಾರ, ಹೊಂದಾಣಿಕೆಯ ಮನೋಭಾವವನ್ನು ಕಾಣಬಹುದು. ಏಕೆಂದರೆ ಅಲ್ಲಿನ ಮ್ಯಾಸರು ಜಾತ್ರೆಗೆ ಮುಂಚೆ ಒಂದೆಡೆ ಕೂತು ಈ ಜಾತ್ರೆಯ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದು ಮತ್ತು ಜಾತ್ರೆಯಲ್ಲಿ ಜಗಳೂರಜ್ಜನ ಒಕ್ಕಲುತನದವರು ಹೊಲದಲ್ಲಿ ಬೆಳೆದ ದವಸ ಧಾನ್ಯಗಳನ್ನು ಕರಿ ಕಂಬಳಿಯಲ್ಲಿ ಗಂಟು ಕಟ್ಟಿಕೊಂಡು ತಲೆ ಮೇಲೆ ಹೊತ್ತುಕೊಂಡು ಕಾಲುನಡಿಗೆಯಲ್ಲಿಯೇ ಬರುತ್ತಾರೆ. ನಂತರ ತಂದಂತಹ ಮೀಸಲನ್ನು ಒಟ್ಟಿಗೆ ಒಂದು ರಾಶಿಯಲ್ಲಿ ಸುರಿಯುತ್ತಾರೆ. ಅಲ್ಲದೇ ಸುತ್ತ ಮುತ್ತಲಿನ ಎಲ್ಲಾ ಕಟ್ಟೆಮನೆಗಳ ದೇವರ ಪೆಟ್ಟಿಗೆಗಳು ಮತ್ತು ದೇವರ ಎತ್ತುಗಳು ಒಂದೆಡೆ ಸೇರುತ್ತವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬೇರೆ ಬೇರೆ ಆಗಿದ್ದರೂ ನಾವೆಲ್ಲಾ ಒಂದೇ ಎನ್ನುವ ಭಾವನೆ ಈ ಜನತೆಯಲ್ಲಿ ಕಂಡುಬರುತ್ತದೆ. ಹೀಗಾಗಿ ಪಾಪನಾಯಕನ ಪವಾಡಗಳನ್ನು ಕೇಳಿದಂತಹ ಜನರು ಅವುಗಳನ್ನು ತಮ್ಮ ಮನದಲ್ಲಿ ಇಂದಿಗೂ ಜೀವಂತವಾಗಿ ಉಳಿಸಿಕೊಳ್ಳುವುದನ್ನು ಕಾಣುತ್ತೇವೆ.

ಬುಡಕಟ್ಟು ಸಮುದಾಯಗಳಲ್ಲಿರುವ ಸಾಂಸ್ಕೃತಿಕ ನಾಯಕರ ವನನದ ವೃತ್ತಾಂತಗಳನ್ನು ಸಾಮಾನ್ಯ ಮನುಷ್ಯನಂತೆ ಚಿತ್ರಿಸದೇ ಅವನ ಹುಟ್ಟನ್ನು ವಿಶೇಷವಾಗಿ ಚಿತ್ರಿಸುವುದು ಕಂಡು ಬರುತ್ತದೆ. ಪ್ರಭಲ

ಕೋಮಿನ ಪುರಾಣ ವ್ಯಕ್ತಿಗಳ ಹುಟ್ಟಿನ ವೃತ್ತಾಂತಗಳನ್ನು ಗಮನಿಸಿದ ಬುಡಕಟ್ಟು ಸಮುದಾಯಗಳು ತಮ್ಮ ಸಾಂಸ್ಕೃತಿಕ ನಾಯಕನೂ ಇತರೆ ಸಮುದಾಯದವರಿಗಿಂತ ಕಡಿಮೆ. ಅಲ್ಲ ಎಂಬ ಭಾವನೆಯನ್ನು ಹುಟ್ಟು ಹಾಕುವ ಸಲುವಾಗಿ ಹುಟ್ಟಿನ ಸಚಿದರ್ಭದಿಂದಲೇ ಅವನ ವೃತ್ತಾಂತಗಳನ್ನು ಸಂಕೀರ್ಣಗೊಳಿಸುತ್ತಿರುವುದನ್ನು ಕಾಣುತ್ತೇವೆ. ಜಗಳೂರು ಪಾಪನಾಯಕನು ಇದಕ್ಕೆ ಹೊರತಾಗಿಲ್ಲ ಎಂದು ಹೇಳಬೇಕಾಗುತ್ತದೆ.

ಆಧುನಿಕ ಜಗತ್ತು ಮ್ಯಾಸಬೇಡರ ಸಮುದಾಯದ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದೆ. ಮ್ಯಾಸನಾಯಕರ ಮತ್ತು ಇತರೆ ಬುಡಕಟ್ಟುಗಳ ಕಲ್ಪನೆಯಲ್ಲಿರುವ ದೈವಗಳನ್ನು ಶಿಷ್ಟೀಕರಣಗೊಳಿಸುವ ಮುಖಾಂತರ ಹಲವಾರು ಬುಡಕಟ್ಟುಗಳನ್ನು ಏಕೀಕರಣಗೊಳ್ಳುವ ಕ್ರಿಯೆಯಲ್ಲಿ ತೊಡಗಿರುವುದನ್ನು ಕಾಣಬಹುದು. ಉದಾಹರಣೆ : ಬಿಳಿಗಿರಿಯ ರಂಗಯ್ಯ ಜೊತೆಗೆ ನಿರ್ದಿಷ್ಟ ಕುಲ ಕಸುಬನ್ನು ಹೊಂದಿದ ಇತರೆ ಬೇರೆ ಬೇರೆ ದೈವಗಳನ್ನು ಒಂದುಗೂಡಿಸುವ ಮೂಲಕ ಏಕೀಕರಣಕ್ಕೆ ಒಳಗಾಗುವುದುಂಟು. ಮ್ಯಾಸಬೇಡರಲ್ಲಿ ಇವರು ಮೂಲತಃ ವಲಸೆಗಾರರು.

ಮ್ಯಾಸಬೇಡರು ಪಟ್ಟಿಗೆ ದೇವರುಗಳು ಸಂಖ್ಯೆ ಹನ್ನೆರಡು ಆ ಕಾರಣಕ್ಕಾಗಿ ಹನ್ನೆರಡು ಪೆಟ್ಟಿಗೆ ದೇವರುಗಳೆಂದು ಹೆಸರಿಸಲಾಗಿದೆ. ವರ್ತನದಲ್ಲಿಯೂ ಮ್ಯಾಸಬೇಡರು ಈ ದೇವರುಗಳ ಆರಾಧನೆಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದಾಗಿದೆ.ಬೇಟೆ ಮತ್ತು  ಪಶುಪಾಲನೆಯ ಸಂದರ್ಭದಲ್ಲಿ ವಲಸೆ ಬಂದಾಗ ಇವರು ತಮ್ಮ ಜೊತೆಯಲ್ಲಿಯೇ ತಂದ ಈ ದೇವರುಗಳಲ್ಲಿ ಶೈವ ಹಾಗೂ ಪಚಿಥದ ದೇವರುಗಳು  ಸಮ ಸಂಖ್ಯೆಯಲ್ಲಿರುವುದು ಕಂಡು ಬರುತ್ತದೆ. ಈ ಪೆಟ್ಟಿಗೆ ದೇವರುಗಳನ್ನು ಪರಂಪರೆ ಮತ್ತು ಆಧುನಿಕತೆ ಎರಡನ್ನೂ ಮಿಶ್ರಣ ಮಾಡಿ ಆರಾಧಿಸುತ್ತಿರುವುದು ಮ್ಯಾಸನಾಯಕರಲ್ಲಿ ಕಾಣಬಹುದಾಗಿದೆ.

ವರ್ತಮಾನದಲ್ಲಿ ಆಗುತ್ತಿರುವ ಬದಲಾವಣೆಗಳಿಂದಾಗಿ ಹಲವಾರು ರೀತಿಯ ಬದಲಾವಣೆಗಳನ್ನು ನಾವು ಮ್ಯಾಸನಾಯಕರಲ್ಲಿ ಕಾಣಬಹುದು. ಈ ಬದಲಾವಣೆಗೆ ಮಾಧ್ಯಮಗಳು, ಆಧುನಿಕ ಉಪಕರಣಗಳು, ಸಮೂಹ ಅಭಿಪ್ರಾಯಗಳು, ಹೀಗೆ ಹಲವಾರು ಕಾರಣಗಳನ್ನು ನಾವು ನೋಡಬಹುದು. ಈ ಕಾರಣದಿಂದಾಗಿ ಅವರ ಆಹಾರ, ಉಡುಪು, ಆಭರಣ ಮುಂತಾದವುಗಳಲ್ಲಿ ಬದಲಾವಣೆ ಆಗಿದ್ದು, ಏಕರೂಪತೆಯನ್ನು ಕಾಣಬಹುದು. ಇಂತಹ ಸಂದರ್ಭದಲ್ಲಿ ನಿರ್ದಿಷ್ಟಕಾರ, ಉಡುಪು, ಆಭರಣಗಳು ಮೂಲೆಗುಂಪಾಗಿ ಹೊಸ ಅಳವಡಿಕೆಗಳು ಮ್ಯಾಸನಾಯಕರಲ್ಲಿ ಕಂಡು ಬರುತ್ತವೆ.

ಬದಲಾದ ಜೀವನಕ್ಕೆ ಸಂಬಂಧ ಪಟ್ಟಂತೆ ಮ್ಯಾಸಬೇಡರ ಚಹರೆಗಳು ಬದಲಾಗುವುದನ್ನು ಕಾಣಬಹುದು. ಉದಾಹರಣೆಗೆ ಚಳ್ಳಕೆರೆ ತಾಲ್ಲೂಕು ಮೊಳಕಾಲ್ಮೂರು ತಾಲ್ಲೂಕಿನ ಬೇಡ ನಾಯಕರ ಕುರಿತು ಹೇಳುವುದಾದರೆ, ಮ್ಯಾಸನಾಯಕರು ಸಾವಿರಾರು ಸಂಖ್ಯೆಯಲ್ಲಿ ಹಟ್ಟಿಗಳಲ್ಲೇ ವಾಸಿಸುವುದರಿಂದ

ಆ ಹಟ್ಟಿಗಳ ಸುತ್ತಲಿನ ಪ್ರಕೃತಿ ನಾಶವಾಗಿದೆ ಮತ್ತು ಮಳೆಯ ಪ್ರಮಾಣ ಇಲ್ಲಿಯೂ ಕಡಿಮೆಯಾಗಿರುವುದರಿಂದ ವ್ಯವಸಾಯ, ಪಶುಪಾಲನೆಗೆ ತುಂಬಾ ಕಷ್ಟವಾಗಿದೆ. ಮಳೆಯ ಕಣ್ಣುಮುಚ್ಚಾಲೆಯಿಂದ ಅಲ್ಪ ಪ್ರಮಾಣದ ವ್ಯವಸಾಯ ಮಾತ್ರ ಉಳಿದುಕೊಂಡಿದೆ. ಇಲ್ಲಿ ಪಶುಪಾಲನೆಯೂ ಇಲ್ಲವಾಗಿದೆ. ಪಶುಪಾಲನೆ ವ್ಯವಸಾಯದ ಜೊತೆಗೆ ತಮ್ಮ ಪ್ರಾಚೀನ ವೃತ್ತಿಯಾದ ಬೇಟೆಯೂ ಅಗಾಗ ಹಬ್ಬ ಹರಿದಿನದ ಮೂರನೇ ದಿನಗಳಲ್ಲಿ ನಡೆಯುತ್ತಿತ್ತು. ಇಲ್ಲಿ ಕಾಡುಗಳು ಉಳಿದಿಲ್ಲವಾದ್ದರಿಂದ ಬೇಟೆಯೂ ಇಲ್ಲ. ಇದರಿಂದ ಬೇಟೆ ಪಶುಪಾಲನೆ, ವ್ಯವಸಾಯ ಮೂರು ವೃತ್ತಿಗಳು ನಿಂತಿವೆ. ಈ ವೃತ್ತಿಗಳು ಅವನತಿ ಹಾದಿ ಹಿಡಿದ ಮೇಲೆ ಸಹಜವಾಗಿಯೇ ಗ್ರಾಮದೇವತೆಗಳ ಆರಾಧನೆಯಲ್ಲಿ ಹೇರು ಪೇರುಗಳಾಗುತ್ತಿದೆ. ಅನೇಕ ಸಂಪ್ರದಾಯಗಳೂ ಕಡಿಮೆಯಾಗಿವೆ. ಈ ಸ್ಥಿತಿಯಲ್ಲಿ ಮ್ಯಾಸ ನಾಯಕರ ಸಾವಿರಾರು ಕುಟುಂಬಗಳು ಈ ಪ್ರದೇಶದಲ್ಲಿವೆ. ಒಪ್ಪೊತ್ತಿನ ಗಂಜಿಗಾಗುವಷ್ಟು ಆಹಾರ ಧಾನ್ಯವನ್ನು ಸಂಗ್ರಹಿಸಿಟ್ಟುಕೊಳ್ಳುವ ಶಕ್ತಿ ಇಲ್ಲದ ಈ ಜನರು ಹಲವಾರು ಪ್ರದೇಶಗಳಲ್ಲಿ ಕಲ್ಲು ಒಡೆಯುವ, ಜಲ್ಲಿ ಕುಟ್ಟುವ. ಹಾಗೂ ಕಟ್ಟಿಗೆ ಕಡಿದು ಪೆಟೆಯಲ್ಲಿ ಮಾರಿ ಬಂದ ಹಣದಿಂದ ಜೀವನ ಮಡುವುದು. ಇಲ್ಲಿ ಕಂಡು ಬರುತ್ತದೆ. ಇಂತಹ ಸಂದರ್ಭದಲ್ಲಿ ಮ್ಯಾಸನಾಯಕರ ಮೊದಲಿನ ಚಹರೆಗಳು ಉಳಿಯಲು ಸಾಧ್ಯವೇ.? ಪ್ರಕೃತಿಯ ಆರಾಧಕರಾಗಿದ್ದ ಬೇಡ ನಾಯಕರು ಕಾಲ ಕಾಲಕ್ಕೆ ಉಂಟಾದ ಧಾರ್ಮಿಕ ಪ್ರಭಾವಗಳಿಗೂ ಒಳಪಟ್ಟಿರುವುದುಂಟು. ಸಮುದಾಯದ ಜೀವನ ಪದ್ಧತಿಯು ಸದಾ ಬದಲಾವಣೆಗೆ ಒಳಪಡುತ್ತ ಸಾಗಿದೆ. ಒಂದು ಕಾಲಘಟ್ಟದಲ್ಲಿನ ಒಂದು ಸಮುದಾಯದ ಜೀವನ ವಿಧಾನ ಇಂದು ಅದು ಕಂಡು ಬರುವುದಿಲ್ಲ. ಸಾಕಷ್ಟು ಬದಲಾವಣೆಹೊಂದಿದೆ. ಸಂಸ್ಕೃತಿ ಎನ್ನುವುದು ಸದಾ ಬದಲಾವಣೆಗೆ ಒಳಗಾಗುವಂತದ್ದೇ ಆದರೆ ಅದರ ಮುಖ್ಯ ಗುಣವಾಗಿದೆ. ಎಂಬುದನ್ನು ಮ್ಯಾಸನಾಯಕರನ್ನ ಗಮನದಲ್ಲಿಟ್ಟುಕೊಂಡು ಹೇಳಬೇಕಾಗುತ್ತದೆ.

ವ್ಯವಸಾಯ ಮನುಷ್ಯನ ವಿಕಾಸದಲ್ಲಿ ದೊಡ್ಡ ಕ್ಞಂತಿಯನ್ನೇ ಮಾಡಿತು. ಆದಿಮಾನವನ ವ್ಯವಸಾಯವನ್ನು ಕಂಡುಕೊಳ್ಳದೇ ಕೇವಲ ಆಹಾರ ಸಂಗ್ರಹಣೆಯನ್ನೇ ಅವಲಂಭಿಸಿ ಅದೇ ಮಾದರಿಯಾಗಿ ಬದುಕುತ್ತಿದ್ದರೆ ಅವನ ಅಸ್ತಿತ್ವವೇ ಈ ಭೂಮಿಯಲ್ಲಿ ಉಳಿಯುತ್ತಿರಲಿಲ್ಲ. ಹೀಗಾಗಿ ವ್ಯವಸಾಯ ಮಾನವನ ವಿಕಾಸದಲ್ಲೂ ಪ್ರಮುಖ ಪಾತ್ರವನ್ನು ವಹಿಸಿತು. ಎಂದೇ ಹೇಳಬೇಕಗುತ್ತದೆ. ವರ್ತಮಾನದಲ್ಲಿ ಮ್ಯಾಸಬೇಡ ಸಮುದಾಯವು ವ್ಯವಸಾಯವನ್ನೇ ತನ್ನ ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುತ್ತಿದ್ದಾರೆ. ಪ್ರಾಚೀನ ಕಾಲದಿಂದಲೂ ಅನೇಕ ಮ್ಯಾಸನಾಯಕರು ಈ ಪ್ರದೇಶದಲ್ಲಿ ಕೃಷಿಯನ್ನೇ ಹೆಚ್ಚು ಜನರು ಅವಲಂಬಿಸಿದ್ದು, ಕಂಡು ಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಜನರು ಹೆಚ್ಚಾಗಿ ಮಳೆಯನ್ನು ನಂಬಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡು ಬರುತ್ತದೆ. ಮಳೆಯ ಪ್ರಮಾಣ ಈ ಪ್ರದೇಶದಲ್ಲಿ ಕಡಿಮೆ ಅಷ್ಟಾಗಿ ಈ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ಹಾಗೂ

ಚಳ್ಳಕೆರೆ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಮ್ಯಾಸ ಬೇಡ ಸಮುದಾಯವು ಇರುವುದು ಕಂಡು ಬರುತ್ತದೆ. ಇವರು ಅರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ. ಈ ತಾಲೂಕುಗಳಲ್ಲಿ ಕಾಲುವೆ, ಹಾಗೂ ಕೆರೆಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಈ ಎರಡು ತಾಲ್ಲೂಕುಗಳು ಬಯಲು ಸೀಮೆ ಪ್ರದೇಶದಲ್ಲಿವೆ.

ಒಂದು ಸಮಾಜ ಮೇಲ್ನೋಟಕ್ಕೆ ಸರಳವಾಗಿ ಕಂಡರೂ ಅಂತರಂಗದಲ್ಲಿ ಅದು ಸಂಕೀರ್ಣ ವ್ಯವಸ್ಥೆಯನ್ನು ಹೊಂದಿರುತ್ತವೆ. ಸಂರಕ್ಷಣೆ, ಭದ್ರತೆ, ಸುಗಮ ಕಾರ್ಯ ನಿರ್ವಹಣೆ ಮುಂತಾದ ಉದ್ದೇಶಗಳಿಗಾಗಿ ಸಮಾಜದಲ್ಲಿ ಹಲವು ಶ್ರೇಣಿಗಳನ್ನು ನಿರ್ಮಿಸಿಗೊಂಡಿರುತ್ತದೆ. ಇಂಥ ಸಾಮಾಜಿಕ ಶ್ರೇಣಿಗಳು ಮ್ಯಾಸನಾಯಕ ಸಮುದಾಯದಲ್ಲಿಯು ಕಂಡು ಬರುತ್ತದೆ. ವರ್ತಮಾನದಲ್ಲಿಯೂ ಸಾಮಾಜಿಕ ಶ್ರೇಣಿಗಳು ತಮ್ಮ ಕಾರ್ಯವನ್ನು ನಿರ್ವಹಿಸುತ್ತವೆ. ಈ ಸಾಮಾಜಿಕ ಶ್ರೇಣಿಗಳನ್ನು ಮ್ಯಾಸನಯಕರು ಅತ್ಯಂತ ನಿಷ್ಠೆಯಿಂದ ಕಾಪಾಡಿಕೊಂಡು ಬಂದಿದ್ದಾರೆ.

ಮ್ಯಾಸನಾಯಕರಲ್ಲಿಯ ಸಾಮಾಜಿಕ ಶ್ರೇಣಿಗಳು ಹೀಗೆವೆ.

೧ ದೊರೆಗಳು

೨ ಯಜಮಾನ

೩. ದಾಸಯ್ಯ

೪ ಕಿಲಾರಿಗಳು

ಈ ಸಮುದಾಯುದಲ್ಲಿ ಇವರುಗಳ ಪಾತ್ರ ಉನ್ನತವಾಗಿರುತ್ತದೆ. ಈ ಶ್ರೇಣಿಗಳು ವಂಶಪಾರ್ಯಂಪರ್ಯವಾಗಿ ಬರುತ್ತವೆ. ಈ ನಾಲ್ಕು ಜನರು ಹಬ್ಬ, ಜಾತ್ರೆ, ಮದುವೆ ಸಂದರ್ಭಗಳಲ್ಲಿ ಇರಲೇಬೇಕು. ಇವರ ಮುಖಾಂತರವೇ ಎಲ್ಲಾ ಕೆಲಸ ಕಾರ್ಯಗಳು ನಡೆಯುವುದು. ವರ್ತಮಾನದಲ್ಲಿ ಮ್ಯಾಸ ಬೇಡ ಸಮುದಾಯದಲ್ಲಿ ಈ ವ್ಯವಸ್ಥೆ ದಟ್ಟವಾಗಿರುವುದು ಕಂಡು ಬರುತ್ತದೆ.

**ಟಿಪ್ಪಣಿಗಳು**

೧. ಬುಡಕಟ್ಟು ಸಮಸ್ಯೆ ಮತ್ತು ಅಭಿವೃದ್ಧಿ, ಪು.ಸಂ–೨೧

೨. ಆದಿವಾಸಿ ಆಖ್ಯಾನ, ಪು.ಸಂ– ೫೩

೩. ಬುಡಕಟ್ಟು ಅಧ್ಯಯನ ಪತ್ರಿಕೆ–೪, ಪು.ಸಂ– ೫೩

೪. ಮ್ಯಾಸಬೇಡರ ಒಂದು ಜನಾಂಗಿಕ ಅಧ್ಯಯನ, ಪು.ಸಂ.– ೨೮ ಹಾಗೂ ೮೭

೫. ಬೇಟೆ ಮತ್ತು ಬೇಡರು, ಪು.ಸಂ– ೨೬೧

೬. ವಾಲ್ಮೀಕಿ ಸಿರಿ, ಪು.ಸಂ– ೯೫ ಹಾಗೂ ೧೦೧

# ಅಧ್ಯಾಯ ಆರು

# ಸಮಾರೋಪ

ಚಿತ್ರದುರ್ಗ ಜಿಲ್ಲೆ ಐತಿಹಾಸಿಕ ಮಹತ್ವ ಪಡೆದಿರುವಂತೆ ಅನೇಕ ವಿಶಿಷ್ಟ ಪರಂಪರೆ ಹೊಂದಿದ ಬುಡಕಟ್ಟುಗಳು ಇಲ್ಲಿ ನೆಲೆಸಿವೆ. ಮ್ಯಾಸನಾಯಕರು, ಕಾಡುಗೊಲ್ಲರು ಹಾಗೂ ಲಂಬಾಣಿಗರು ಕಂಡು ಬರುತ್ತಾರೆ. ಈ ಜಿಲ್ಲೆಯ ಬುಡಕಟ್ಟುಗಳ ಬಗ್ಗೆ ಈಗಾಗಲೇ ಅಧ್ಯಯನಗಳು ನಡೆದಿವೆ. ಮ್ಯಾಸಬೇಡರ ಸಾಂಸ್ಕೃತಿಕ ನಾಯಕರ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಮ್ಯಾಸಬೇಡರ ಸಾಂಸ್ಕೃತಿಕ ನಾಯಕರಾದ ಜಗಳೂರಜ್ಜನನ್ನು ಸಂಕ್ಷಿಪ್ತವಾಗಿ ಆತನ ನೆಲೆಗಳನ್ನು, ಪವಾಡಗಳನ್ನು, ಹೋರಾಟಗಳನ್ನು ವಿವರಿಸುವುದು ಕಷ್ಟದ ಕೆಲಸ. ಈ ಸಾಂಸ್ಕೃತಿಕ ನಾಯಕರಿಗೆ ಸಂಬಂಧಿಸಿದಂತೆ ಅಲಿಖಿತ/ಮೌಖಿಕ ಸಾಹಿತ್ಯದ ಮೂಲಕ ಸಮುದಾಯವೊಂದರ ಇತಿಹಾಸ, ಸಾಮಾಜಿಕ, ಸಾಂಸ್ಕೃತಿಕ, ಸಂಗತಿಗಳೆಲ್ಲವೂ ಧಾಖಲಿಸಲ್ಪಡುತ್ತವೆ. ಅವು ಆಚರಣೆಗಳು ಮತ್ತು ಕಲಾಪ್ರದರ್ಶನಗಳ ಸಂದರ್ಭದಲ್ಲಿ ವ್ಯಕ್ತರೂಪವನ್ನು ಪಡೆಯುತ್ತವೆ. ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರಗಳು ಹಾಗೂ ದೈವಗಳನ್ನು ವಿಷಯವನ್ನು ಸಂಗ್ರಹಿಸಿ ಇಲ್ಲಿ ವಿಶ್ಲೇಷಿಸ್ಲಿ ಸಂಗ್ಗಿಸಿದ . ಮಾಹಿತಿಗಳು ಸಾಮಾನ್ಯವಾಗಿ ಜಾನಪದ ಪದ್ಯರೂಪದಲ್ಲಿವೆ ಈ ಅಧ್ಯಯನದಲ್ಲಿ ವಿಶ್ಲೇಷಿಸಿದ ಅನೇಕ ಸಂಗತಿಗಳು ಬಿಡಿ ಬಿಡಿಯಾಗಿ ಗದ್ಯದಲ್ಲಿ ದೊರೆತಿವೆ. ಅವುಗಳನ್ನು ದಾಖಲಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಿದ್ದೇನೆ.

ಸಮುದಾಯದ ಮಾತೃಭಾಷೆಯು ತೆಲುಗು ಆಗಿದ್ದರೂ ಮ್ಯಾಸಬೇಡ ಮಹಿಳೆಯರ ಸೋಬಾನ ಪದಗಳನ್ನು ಕನ್ನಡದಲ್ಲಿ ಹಾಡುವುದು ಒಂದು ವಿಶೇಷವಾಗಿದೆ. ಪದ್ಯ ಕಥನಗಳು ಕನ್ನಡದಲ್ಲಿದ್ದು ಪೂರಕ ಮಾಹಿತಿಗಳನ್ನು ತೆಲುಗಿನಲ್ಲಿ ಹೇಳುವುದು ಇಲ್ಲಿಯ ಸಾಮಾನ್ಯವಾದ ಕ್ರಮವಾಗಿದೆ.

ಸಾಂಸ್ಕೃತಿಕ ನಾಯಕರ ಬಗೆಗೆ ವಿವರಗಳನ್ನು ಕೊಡುವ ಮೊದಲು ಸಮುದಾಯದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ವಿವರಿಸುವುದು ನನಗೆ ಅಗತ್ಯವೆನಿಸಿತು. ಅದರಲ್ಲಿಯೂ ಮುಖ್ಯವಾಗಿ ಪುರುಷರ ಮೂಲಕ ಈ ಸಮುದಾಯವನ್ನು ಅರಿಯುವುದು ನನ್ನ ಉದ್ದೇಶವಾದ್ದರಿಂದ ಇಂತಹ ಸಾಂಸ್ಕೃತಿಕ ಆಚರಣೆಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಾಗ 'ಮಾತೃಮಾಲೆಯ ಪದ್ಧತಿ' ಪಳೆಯುಳಿಕೆಗಳು ಅನೇಕ ಪುರುಷ ಸಂಬಂಧಿ ಆಚರಣೆಗಳಲ್ಲಿ ಬಳಕೆಗೊಳ್ಳುವುದನ್ನು ಗಮನಿಸಿ ಸಂಬಂಧಿಸಿದ ವಿವರಗಳನ್ನು ಪರಿಶೀಲಿಸಿ ಇದೊಂದು ಪಿತೃ ಮೂಲಿಯವಾಗಿದ್ದ ಸಮುದಾಯವೆಂದು ಈ ಅಧ್ಯಯನದಲ್ಲಿ ಕಂಡುಕೊಂಡಿದ್ದೇನೆ.

"ಮ್ಯಾಸ" ಪದವೇ ಇದೂವರೆಗೂ ನಡೆದಿರುವ ಅಧ್ಯಯನಗಳಲ್ಲಿ ಸಾಕಷ್ಟು ಚರ್ಚೆಗೆ ಗ್ರಾಸವಾಗಿದೆ. ವೃತ್ತಿ ಸ್ಥಳ, ಜೀವನ ವಿಧಾನ ಹೀಗೆ ಯಾವುದಾದರೂ ಒಂದು ಸಂಗತಿಯು ಈ ಪದ ರೂಪಗೊಳ್ಳುವಲ್ಲಿ

ಕೆಲಸ ಮಾಡಿರಬೇಕು. ಎಂದು ಆಲೋಚಿಸಿ "ಅಲ್ಲಲ್ಲಿಯೆ ತಿರುಗಾಡುವವರೆ ಮ್ಯಾಸರು ಎಂಬುದನ್ನು ತೆಲುಗು ಪದಕೋಶದಿಂದ ಗ್ರಹಿಸಿದೆ. ಪಶುಪಾಲನೆಯ ನಿಮಿತ್ತ ಹುಲ್ಲುಗಾವಲನ್ನು ಅರಸುತ್ತಾ ಇವರು ಅಲೆದಾಡುವದು ಅನಿವಾರ್ಯವಾದ ಕಾರಣ ಈ ಪದವು ಒಟ್ಟು ಬೇಡ ನಾಯಕರ ಸಮುದಾಯಕ್ಕೆ ವಿಶೇಷವಾಗಿರುವ ಸಾಧ್ಯತೆಯು ಖಚಿತವಾಯಿತು.

ಈ ಸಮುದಾಯವು ಆಂದ್ರದ ಶ್ರೀಶೈಲದಿಂದ ಮಧ್ಯ ಕರ್ನಾಟಕದ ಕಡೆ ಬಂದಿದೆ. ಎಂಬುದನ್ನು ಇದೂವರೆಗೆ ನಡೆದ ಎಲ್ಲಾ ಅಧ್ಯಯನಗಳಲ್ಲೂ ನಮೂದಿಸಲ್ಪಟ್ಟಿದೆ. ಅದರ ಜೊತೆಗೆ ಇವರು ಉತ್ತರ ಭಾರತದ ಮೂಲನಿವಾಸಿಗಳು ಇರಬಹುದು. ಎಂಬ ಸೂಚನೆಗಳನ್ನು ಅಧ್ಯಯನಗಳಲ್ಲಿ ಸೂಚಿಸಲಾಗಿದೆ. ಅನ್ಯರ ಆಕ್ರಮಣವು ಮೂಲನಿವಾಸಿಗಳ ಬದುಕನ್ನೇ ಹೇಗೆ ತಲ್ಲಣಗಳಿಗೆ ಒಳಗು ಮಾಡಿ ಸ್ಥಳಾಂತರಗೊಳಿಸುತ್ತದೆ. ವರ್ತಮಾನದಲ್ಲಿ ಆ ಸಮುದಾಯಗಳೊಂದಿಗೆ ನಡೆಸಬೇಕಾದ ಅನುಸಂಧಾನಗಳ ಬಗೆಯನ್ನು ತಿಳಿದುಕೊಳ್ಳಲು ಇಂತಹ ತಿಳುವಳಿಕೆಯು ನೆರವಾಗಬಹುದು. ಸಮಾಜ ಕಲ್ಯಾಣವನ್ನು ಸಾಧಿಸುವ ಹಾದಿಯ ಮೊದಲ ಹಂತವೇ ಸಮುದಾಯಗಳ ಇತಿಹಾಸ ಮತ್ತು ಸಂಸ್ಕೃತಿಗಳ ಗಾಢವಾದ ಅರಿವು.

ಸ್ವಾಯತ್ತವಾಗಿದ್ದ ಸಮುದಾಯವೊಂದು ತನ್ನ ಮೂಲ ನೆಲೆ ಮತ್ತು ಬದುಕನ್ನೇ ಕಳೆದುಕೊಂಡಾಗ ಬದುಕಿನ ಅನಿವಾರ್ಯ ಮತ್ತು ಅಗತ್ಯಗಳಿಗಾಗಿ ಪರದಾಡಿದ್ದು ನಿಶ್ಚಿತ ಉದ್ಯೋಗವಿಲ್ಲದೆ ತೊಳಲಾಡುತ್ತಲೇ ಸಾಮಾಜಿಕ ಅಸಮಾನತೆಗೆ ತುತ್ತಾಗಿದ್ದನ್ನು ಕಾಣಬಹುದು.

ನನ್ನ ಅಧ್ಯಯನದ ಮುಖ್ಯ ಕೇಂದ್ರವೆಂದರೆ ಈ ಸಮುದಾಯದ ಸಾಂಸ್ಕೃತಿಕ ಕೇಂದ್ರಗಳು ಮತ್ತು ದೈವಗಳು ಅತಿ ಮುಖ್ಯವಾಗಿ ಜಗಳೂರಜ್ಜನ ನೆಲೆಗಳು ಸಾಂಸ್ಕೃತಿಕ ಕೇಂದ್ರಗಳನ್ನು ಹಾಗೂ ಹಬ್ಬ ಜಾತ್ರೆಗಳನ್ನು ಗಮನದಲ್ಲಿಟ್ಟುಕೊಂಡು ಸಾಂಸ್ಕೃತಿಕ ನಾಯಕನೆಂದು ಅವನೊಬ್ಬ ನಿಶ್ಚಿತವಾಗಿ ಹೇಳಬಹುದು. ಮ್ಯಾಸಬೇಡರ ಸೃಷ್ಠಿ ಪುರಾಣವೂ ಇವರ ಪಶುಪಾಲಕ ವೃತ್ತಿಯ ಮೂಲದಿಂದಲೇ ತಮ್ಮ ಸೃಷ್ಠಿ ಪುರಾಣವನ್ನು ಕಟ್ಟಿಕೊಂಡಿದ್ದಾರೆ. ಎಂಬುದನ್ನು ಕಾಣಬಹುದು.

ಪ್ರಸ್ತುತ ದಿನಗಳಲ್ಲಿ ಜಗಳೂರಜ್ಜನನ್ನು ಮ್ಯಾಸಬೇಡ ಸಮುದಾಯದ ಯಾವ ರೀತಿ ನೋಡುತ್ತಿದೆ. ಎಂಬುದನ್ನು ವಿಶ್ಲೇಷಿಸಲಾಗಿದೆ. ಜಗಳೂರಜ್ಜ ಮ್ಯಾಸಬೇಡರಿಗೆ ಏಕೆ ಆರಾಧ್ಯ ದೈವನಾಗುತ್ತಾನೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಪ್ರತಿಯೊಬ್ಬ ಮನುಷ್ಯನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ವೀರತ್ವದ, ಶೂರತ್ವದ ಗುಣಗಳು ಇದ್ದೇ ಇರುತ್ತವೆ. ಅವುಗಳನ್ನು ಉಳಿಸಿಕೊಳ್ಳಲು ಮನುಷ್ಯ ಸದಾ ಪ್ರಯತ್ನಿಸಬೇಕು. ಸಮುದಾಯಗಳಲ್ಲಿ ಎರಡು ರೀತಿಯ ವೀರ ಪುರುಷರನ್ನು ಕಾಣಬಹುದು. ಒಪ್ಪಿತವಾದ ಸಮಾಜದಲ್ಲಿ ಅವನಲ್ಲಿರುವ ಆದರ್ಶಗಳು, ಧ್ಯೇಯ ಧೋರಣೆಗಳು, ನೈತಿಕ ಮೌಲ್ಯಗಳು ಇತರರಿಗೆ ಅವುಗಳು ಮಾರ್ಗದರ್ಶಿಯಾದಾಗ ಅವನ ಜೀವನ ಸಾರ್ಥಕವಾಗುತ್ತದೆ. ಆದರೆ ದೈವ ವಾಣಿಯಿಂದಲೊ ಅಥವಾ ತನ್ನ ಸುತ್ತಮುತ್ತಲಿನ ಜನತೆಯಿಂದಲೋ ಅವನು ನಂಬಿದ ಮೌಲ್ಯಗಳು ಅದ:ಪತನವಾದಾಗ ಅವನೊಬ್ಬ ದುರಂತ ನಾಯಕನಾಗುತ್ತಾನೆ.

ತನ್ನ ಸಮುದಾಯದ ಏಳಿಗೆಗಾಗಿ ತನ್ನ ಜನರ ಉದ್ದಾರಕ್ಕಾಗಿ ಅಲ್ಲದೇ ತನ್ನ ಕುಲಬಾಂದವರನ್ನು ಉಳಿಸುವುದಕ್ಕಾಗಿ ಸ್ವಾರ್ಥವನ್ನು ಬಿಟ್ಟು ನಿಸ್ವಾರ್ಥ ಮನೋಭಾವದಿಂದ ಹೋರಾಡಿ ತನ್ನ ಪ್ರಾಣವನ್ನೇ

ಮುಡುಪಾಗಿಟ್ಟ ತ್ಯಾಗಮೂರ್ತಿಯೇ ಸಾಂಸ್ಕೃತಿಕ ವೀರ , ಬಹುಶಃ ಎಲ್ಲ ಬುಡಕಟ್ಟುಗಳಲ್ಲಿ ಇಂತಹ ವೀರರು ಇರುವುದನ್ನು ಕಾಣುತ್ತೇವೆ. ಕಾಡುಗೊಲ್ಲರಲ್ಲಿ ಉತ್ತಪ್ಪ, ಜುಂಜಪ್ಪರು ಇರುವ ಹಾಗೇ ಮ್ಯಾಸಬೇಡರಲ್ಲಿ ಜಗಳೂರು ಪಾಪನಾಯಕ ಎಂಬ ಅಲಕ್ಷಿತ ಸಾಂಸ್ಕೃತಿಕ ವೀರನನ್ನು ಕಾಣಬಹುದು.

ದಕ್ಷಿಣ ಕರ್ನಾಟಕದ ಭಾಗದಲ್ಲಿ ಮಾದೇಶ್ವರ, ಮಂಟೇಸ್ವಾಮಿ ಕಾವ್ಯಗಳು ಹುಟ್ಟಿಕೊಂಡರೆ ಮಧ್ಯ ಕರ್ನಾಟಕದ ಪೂರ್ವ ಭಾಗದಲ್ಲಿ ಚಿತ್ರದುರ್ಗ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ವಾಸವಾಗಿರುವ ಮ್ಯಾಸಬೇಡರು ಮತ್ತು ಕಾಡುಗೊಲ್ಲರ ಅನಕ್ಷರಸ್ಥ ಸಮುದಾಯದಿಂದ ಹುಟ್ಟಿಕೊಂಡ ಸಾಂಸ್ಕೃತಿಕ ವೀರನನ್ನು ಕುರಿತು ಕಥನ ಗೀತೆಗಳು ಕಥೆಗಳು ವಿಶಿಷ್ಟವಾಗಿವೆ. ಕಾಡುಗೊಲ್ಲರ ಸಾಂಸ್ಕೃತಿಕ ವೀರನಾದ ಉತ್ತಪ್ಪ ಜುಂಜಪ್ಪ ಮ್ಯಾಸಬೇಡರ ಸಾಂಸ್ಕೃತಿಕ ವೀರನಾದ ಜಗಳೂರು ಪಾಪನಾಯಕನ ಕಥೆಯು ಮಣ್ಣಿನ ವಾಸನೆಯಿಂದ ಉದ್ಭವಿಸಿದ ವಿಶಿಷ್ಟ ಕಾವ್ಯಗಳಾಗಿವೆ.

ಈ ವೀರರ ವ್ಯಕ್ತಿತ್ವ ಭಿನ್ನವಾಗಿರುವುದನ್ನು ಕಾಣಬಹುದು. ಶೀಲ, ಶೌಚ, ಸಂಸ್ಕೃತಿಯ ಪ್ರತೀಕವಾದ ಜಗಳೂರಜ್ಜನ ನಡಾವಳಿಗಳ ಮೂಲಕ ಈ ಬುಡಕಟ್ಟಿನ ಧರ್ಮ ವೀರನಾಗುತ್ತಾನೆ. ಈ ರೀತಿಯ ವೀರನು ವಿಭಿನ್ನವಾಗಿರುವುದರಿಂದ ಬುಡಕಟ್ಟಿನ ಜನರ ಶ್ರೇಷ್ಠರನ್ನಾಗಿಸುತ್ತಾರೆ. ಸಾಂಸ್ಕೃತಿಕ ಅನನ್ಯತೆಯಿಂದ ಹೀಗಾಗಿರಬಹುದು. ಸಾಂಸ್ಕೃತಿಕ ನಾಯಕರನ್ನು ದೈವತ್ವಕ್ಕೇರಿಸುವುದು ಎಲ್ಲಾ ವರ್ಗಗಳಲ್ಲಿದೆ. ಬೇರೆಯವರ ಕಣ್ಣಿಗೆ ಇವರು ದುಷ್ಟರಾಗಿ ಕಂಡರೂ ಆ ಸಮುದಾಯ ಮಾತ್ರ ಅವರನ್ನು ದೇವರೆಂದು ಪೂಜಿಸುತ್ತಾರೆ ಈ ವರ್ಗದ ಜನರಿಗೆ ಒಂದಲ್ಲ ಒಂದು ರೀತಿಯಲ್ಲಿ ಸಹಾಯ ಮಾಡಿರುತ್ತಾರೆ. ಇದರಿಂದ ಇವರನ್ನೇ ದೈವಾಂಶಸಂಭೂತರೆಂದು ಭಾವಿಸಿ ಆರಾಧಿಸುವುದನ್ನು ಕಾಣುತ್ತೇವೆ.

ಪಾಪನಾಯಕನ ಕಥೆಯಲ್ಲಿ ಮ್ಯಾಸಬೇಡರ ಸಮಗ್ರ ಸಂಸ್ಕೃತಿಯ ಹೊಳವುಗಳನ್ನು ಕಾಣಬಹುದು. ಅಷ್ಟೇ ಅಲ್ಲದೇ ಈತನ ಕಾವ್ಯದಲ್ಲಿ ದುಷ್ಟಶಕ್ತಿಗಳೊಂದಿಗೆ ಹೋರಾಟವನ್ನು ತಿಳಿಸುತ್ತದೆ. ಮ್ಯಾಸಬೇಡರ ಸಾಂಸ್ಕೃತಿಕ ಕೇಂದ್ರದಲ್ಲಿ ಒಂದಾದ ಕಂಪಳದೇವರಹಟ್ಟಿ ಇಲ್ಲಿ ನಡೆಯುವ ಜಗಳೂರಜ್ಜನ ಹಬ್ಬಕ್ಕೆ ವಿವಿದೆಡೆಗಳಲ್ಲಿರುವ ದೇವರೆತ್ತುಗಳು ಬರುವುದು. ಅವರ ಕಾಸು ಮೀಸಲನ್ನು ಬರಿಗಾಲಲ್ಲೇ ತಲೆ ಮೇಲೆ ಹೊತ್ತು ತರುವುದನ್ನು ನೋಡಿದರೆ ಬೇಡರ ಸಮಗ್ರ ಸಂಸ್ಕೃತಿಯ ಚಿತ್ರಣ ನಮ್ಮ ಕಣ್ಣು ಮುಂದೆ ನಿಲ್ಲುತ್ತದೆ. ಮತ್ತು ಅರಣ್ಯವಾಸಿಗಳಾಗಿದ್ದ ಬೇಡರ ಪಶುಪಾಲಕ ಸಂಸ್ಕೃತಿಯ ಚಿತ್ರವೊಂದನ್ನು ಅಭಿನಯಿಸುವಂತೆ ಇಡೀ ಸಂಪ್ರದಾಯಗಳು ನಡೆಯುತ್ತದೆ. ದೇವರ ಎತ್ತುಗಳನ್ನು ಕೇಕೆ ಹಾಕುತ್ತ ಓಡಿಸುವುದು, ದಾಸರು ಪಂಜು ನುಂಗುವುದು ಇಂತಹ ಹತ್ತಾರು ಆಚರಣೆಗಳು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿವೆ.

ಮ್ಯಾಸಬೇಡರ ಸಂಸ್ಥಾನವೆಂದರೆ ಮುತ್ತಿಗಾರಹಳ್ಳಿಯ ಕಮರ ಕಾವಲಿನಲ್ಲಿರುವ ಶ್ರೀಶೈಲ ಮಲ್ಲಿಕಾರ್ಜುನನ ಎತ್ತುಗಳು ಮ್ಯಾಸಬೇಡರು ತಮ್ಮ ಸಂಪ್ರದಾಯ ಆಚರಣೆಗಳನ್ನು ಅಲ್ಲಿಯೂ ಇನ್ನೂ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು ಶ್ರಾವಣ ಮಾಸದಲ್ಲಿ ನವ ವಧು-ವರರು ಭಾನುವಾರ ರಾತ್ರಿ ಮುತ್ತೈಯ್ಯಗಳ ಸಿಧಿಯಲ್ಲಿ ಮಲಗಿ ಅಲ್ಲಿನ ಕಿಲಾರಿಗಳಿಂದ ಆಶೀರ್ವಾದ ಪಡೆದು ಹೋಗುವುದನ್ನು ಆಧುನಿಕ ದಿನಗಳಲ್ಲಿಯೂ ಕಂಡು ಬರುವುದನ್ನು ನೋಡಬಹುದು. ಇವರು ಆಚರಿಸುವ ಆಚರಣೆಗಳು ಮ್ಯಾಸಬೇಡರ ಸಂಸ್ಕೃತಿಯ

ಚಿತ್ರಣವನ್ನು ಬಿಂಬಿಸುತ್ತದೆ.

ಮ್ಯಾಸಬೇಡರ ಕಟ್ಟೆಮನೆಗಳಲ್ಲಿ ನ್ಯಾಯ ತೀರ್ಮಾನಗಳು ಇಂದು ಅಷ್ಟೇನು ನಡೆಯುವುದಿಲ್ಲ. ಅವರು ಕಿಲಾರಿಗಳಿಗೆ ನಾಯಕರಿಗೆ ಏಳು ಜನ ಹಿರಿಯರಿಗೆ ದಾಸಯ್ಯ ಇವರಲ್ಲೇನಾದರೂ ಒಳಜಗಳ ಗಳಾದರೂ ಇವರಿಗೆ ತೀರ್ಮಾನ ನೀಡುವುದು ಕಟ್ಟೆಮನೆಗಳ ಮೂಲಕವೇ ಬಗೆ ಹರಿಸುತ್ತಾರೆ. ಇಲ್ಲಿ ಬಗೆಹರಿ ಯಲಿಲ್ಲವೆಂದರೆ ಕಂಪಳದೇವರಹಟ್ಟಿಯ ಗುರು ಸ್ಥಾನದಲ್ಲಿ ನ್ಯಾಯ ತೀರ್ಮಾನವನ್ನು ಕೈಗೊಳ್ಳುತ್ತಾರೆ. ಬಹುತೇಕವಾಗಿ ಎಲ್ಲಾ ಬುಡಕಟ್ಟುಗಳು ಸಾಂಸ್ಕೃತಿಕ ವೀರರ ಮರಣ ದುರಂತಮಯವಾಗುತ್ತದೆ. ಈ ವೀರರ ಸಾವು ಒಬ್ಬೊಬ್ಬರ ಹುಲಿಯೊಂದಿಗೆ ಹೋರಾಟ ಮಾಡುತ್ತಾ ಮರಣ ಹೊಂದಿದರೆ, ಪಾಪನಾಯಕ ಜಗಳೂರಿನ ಜಗಪತಿರಾಯನ ವಿರುದ್ಧ ಹೋರಾಡಿ ಸಾವನ್ನಪ್ಪುತ್ತಾನೆ.

# ಮಾಹಿತಿದಾರರ ವಿವರ

| ಕ್ರಸಂ | ಹೆಸರು | ಗಂಡ | ವಯಸ್ಸು | ವೃತಿ | ಊರು |
|---|---|---|---|---|---|
| ೦೧ | ಪಾಲಮ್ಮ | ದಿ.ತಿಮ್ಮಯ್ಯ | ೮೦ | ಕೂಲಿ | ಪೆತ್ತಮ್ಮನವರಹಟ್ಟಿ |
| ೦೨ | ರಾಯಮ್ಮ | ಸಂಚಯ್ಯ | ೫೦ | ಕೂಲಿ | ಚಳ್ಳಕೆರೆ ತಾಲೂಕು |
| ೦೩ | ಬೋರಮ್ಮ | ಕಾಟಯ್ಯ | ೪೫ | ಕೂಲಿ | ಚಳ್ಳಕೆರೆ ತಾಲೂಕು |
| ೦೪ | ಸಣ್ಣಪಾಲಮ್ಮ | ಸಣ್ಣ ಓಬಯ್ಯ | ೫೦ | ಕೂಲಿ | ಚಳ್ಳಕೆರೆ ತಾಲೂಕು |
| ೦೫ | ಓಬಮ್ಮ | ತಮ್ಮಯ್ಯ | ೫೦ | ಕೂಲಿ | ಚಳ್ಳಕೆರೆ ತಾಲೂಕು |
| ೦೬ | ಓಬಮ್ಮ | ಗೊಂಚಿಕಾರ | ೬೦ | ಕೂಲಿ | ಚಳ್ಳಕೆರೆ ತಾಲೂಕು |
| ೦೭ | ಕ್ಯಾತಮ್ಮ | ಬಡಪಾಲಯ್ಯ | ೫೦ | ಕೂಲಿ | ಸೂರಮ್ಮನಹಳ್ಳಿ |
| ೦೮ | ಎತ್ತಿನ ಬೋರಮ್ಮ | ಕುಂಟಬಸಯ್ಯ | ೫೮ | ಕೂಲಿ | ಸೂರಮ್ಮನಹಳ್ಳಿ |
| ೦೯ | ಬಸಮ್ಮ ನಾಯಕ | ಪಾಲಯ್ಯ | ೫೫ | ಕೂಲಿ | ಸೂರಮ್ಮನಹಳ್ಳಿ |
| ೧೦. | ಪಾಪಮ್ಮ | ಊರಬಾಗಿಲು | ಪಾಲಯ್ಯ | ೫೬ | ಕೂಲಿ ಸೂರಮ್ಮನಹಳ್ಳಿ |

| ಕ್ರಸಂ | ಹೆಸರು | ತಂದೆ | ವಯಸ್ಸು | ವೃತಿ | ಊರು |
|---|---|---|---|---|---|
| ೦೧ | ಪೂಜಾರಿ ಮುತ್ತಣ್ಣ | ಪಿ. ಓಬಯ್ಯ | ೫೬ | ವ್ಯವಸಾಯ | ಪೂಜಾರಹಟ್ಟಿ |
| ೦೨ | ಪಾಪಣ್ಣ | ಪಿ. ಓಬಯ್ಯ | ೫೪ | ವ್ಯವಸಾಯ | ಪೂಜಾರಹಟ್ಟಿ |
| ೦೩ | ದೊಡ್ಡಬೋರಯ್ಯ | ಬೋರಯ್ಯ | ೮೦ | ವ್ಯವಸಾಯ | ಕಂಪಳದೇವರಹಟ್ಟಿ |
| ೦೪. | ಜಿ. ಕುಂಟಓಬಯ್ಯ | ಸಣ್ಣ ಓಬಯ್ಯ | ೬೫ | ದಳಪತಿ | ರುದ್ರಮ್ಮನಹಳ್ಳಿ |
| ೦೫. | ಬೋರಯ್ಯ | ಓಬಯ್ಯ | ೬೫ | ಕೃಷಿ | ಕಂಪಳದೇವರಹಟ್ಟಿ |
| ೦೬. | ಪುಂಡಯ್ಯ ಗಟ್ಟಯ್ಯ | ಪುಂಡಯ್ಯ | ೬೫ | ಕೃಷಿ | ಸೂರಮ್ಮನಹಳ್ಳಿ |
| ೦೭. | ಬಟ್ಲಯ್ಯನರ ಗಟ್ಟಯ್ಯ | ದೊಡ್ಡಮಲ್ಲಯ್ಯ | ೭೦ | ಕೃಷಿ | ಸೂರಮ್ಮನಹಳ್ಳಿ |
| ೦೮ | ರೇವಣ್ಣ | ಪೂಜಾರಿ ಓಬಯ್ಯ | ೨೮ | ಪೂಜಾರಿ | ಕಂಪಳದೇವರಹಟ್ಟಿ |

| | | | | | |
|---|---|---|---|---|---|
| ೦೯ | ಜಿ.ಪಿ.ಪಾಲಯ್ಯ | ಗಟ್ಟಯ್ಯ | ೫೦ | ಕೃಷಿ | ಸೂರಮ್ಮನಹಳ್ಳಿ |
| ೧೦. | ನಿಜಲಿಂಗಪ್ಪ ಪೂಜಾರಿ | ನಿಜಲಿಂಗಪ್ಪ | ೭೦ | ಪೂಜಾರಿ | ಕಾಮಗೇತನಹಳ್ಳಿ |
| ೧೧. | ಲೊಕೇಶ್ | ಓಬಯ್ಯ | ೩೦ | ಕೃಷಿ | ಪೆತ್ತಮಾರಹಟ್ಟಿ |
| ೧೨. | ಪೂಜಾರಿ ಬೋರಯ್ಯ | ಬೋರಯ್ಯ | ೬೫ | ಪೂಜಾರಿ | ಬಂಗಾರದೇವರಹಟ್ಟಿ |
| ೧೩. | ಬೋರಮ್ಮ | ಬೋರಯ್ಯ | ೩೦ | ಕೂಲಿ | ಬಂಗಾರದೇವರಹಟ್ಟಿ |
| ೧೪. | ಪಿ. ತಿಪ್ಪೇಸ್ವಾಮಿ | ವೀರಣ್ಣ | ೬೧ | ನಿವೃತ್ತ ಮುಖ್ಯೋಪಾಧ್ಯರು | ಕಾಟಪ್ಪನಹಟ್ಟಿ |
| ೧೫. | ಜಿ.ಪಿ. ಮಲ್ಲಿಕಾರ್ಜುನ | ಪಾಲಯ್ಯ ಜಿ.ಪಿ | ೨೭ | ಬಿ.ಎ. | ಸೂರಮ್ಮನಹಳ್ಳಿ |
| ೧೬. | ಸೂರಯ್ಯ ಎನ್.ಕೆ. | ಕಾಟಯ್ಯ | ೫೮ | ನೌಕರ | ಕಾಟಪ್ಪನಹಟ್ಟಿ |

# ಪರಾಮರ್ಶನ ಗ್ರಂಥಗಳು

೧. ಕರಿಶೆಟ್ಟಿ ರುದ್ರಪ್ಪ ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ಕೃಷ್ಣಮೂರ್ತಿ ಹನೂರು– ಮ್ಯಾಸಬೇಡರ ಸಂಸ್ಕೃತಿ ಸಂವಹನ, ಮೈಸೂರು – ೧೯೯೩

೩. ವಿರೂಪಾಕ್ಷಿ ಪೂಜಾರಹಳ್ಳಿ– ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ ೨೦೦೬

೪. ಬೋರಲಿಂಗಯ್ಯ ಹಿ.ಚಿ.– ಕಾಂಕ್ರಿಟ್ ಮತ್ತು ಜಾನಪದ ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ ೧೯೯೫

೫. ಸಂ: ಕಾಳೇಗೌಡ ನಾಗವಾರ– ಹುಚ್ಚಪ್ಪ ಮಾಸ್ತರ ಗಿರಿಜನ ಸಂಸ್ಕೃತಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಕನ್ನಡಭವನ ಜೆ.ಸಿ.ರಸ್ತೆ ಬೆಂಗಳೂರು ೨೦೦೦

೬. ಗಂಗಾಧರ ದೈವಜ್ಞ– ಬುಡಕಟ್ಟು ಸಮಾಜ ಹುಟ್ಟು–ಸಾವಿನ ನಡುವೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭. ರಹಮತ್ ತರೀಕೆರೆ– ಕರ್ನಾಟಕದ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೮. ವಿರೂಪಾಕ್ಷಿ ಪೂಜಾರಹಳ್ಳಿ– ಬೇಟೆ ಮತ್ತು ಬೇಡರು ಚಿನ್ನಹಗರಿ ಕೆ.ಬಿ. ಹಟ್ಟಿ ಪೂಜಾರಹಳ್ಳಿ, ೨೦೦೭

೯. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ– ೨೦೦೦

೧೦. ಸಂ: ಬೋರಲಿಂಗಯ್ಯ ಹಿ.ಚಿ. ಪ್ರಭಾಕರ ಎ.ಎಸ್. ಬುಡಕಟ್ಟು ಅಧ್ಯಯನ ಪತ್ರಿಕೆ–೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಮೀರಾಸಾಬಿಹಳ್ಳಿ ಶಿವಣ್ಣ 'ಮ್ಯಾಸಬೇಡ ಮಂಡಲ' ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೩

೧೨. ಸಂ: ವಿರೂಪಾಕ್ಷಿ ಪೂಜಾರಹಳ್ಳಿ–'ವಾಲ್ಮೀಕಿ ಸಿರಿ' ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ ೨೦೦೬

೧೩. ಸಂ: ಮೈತ್ರಿ ಕೆ.ಎಂ. ಚಲುವರಾಜು 'ಬುಡಕಟ್ಟು ಅಧ್ಯಯನ ಸಂಪುಟ' ೨೦೦೬

೧೪. ಮಂಜುನಾಥ ಬೇವಿನಕಟ್ಟಿ– 'ಆದಿವಾಸಿ' ಪ್ರಕಾಶಕರು ಸಾಹಿತ್ಯ ನಂದನ ನರ್೯, ೪ನೇ 'ಇ' ಬ್ಲಾಕ್ ರಾಜಾಜಿ ನಗರ ಬೆಂಗಳೂರು ೨೦೦೭

೧೫. ಈಶ್ವರಪ್ಪ ಎಂ.ಜಿ. 'ಮ್ಯಾಸಬೇಡರು' ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೮೨

೧೬. ವಿರೂಪಾಕ್ಷ ಪುಜಾರಹಳ್ಳಿ– 'ಕಾಮಗಾತಿ ವಂಶ ಚರಿತ್ರೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬

೧೭. ಬೋರಲಿಂಗಯ್ಯ ಹಿ.ಚಿ 'ಬುಡಕಟ್ಟು ದೈವಾರಾಧನೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ವಿರೂಪಾಕ್ಷಿ ಪೂಜಾರಹಳ್ಳಿ– 'ಚಿತ್ರದುರ್ಗಜಿಲ್ಲೆಯ ಬುಡಕಟ್ಟುವೀರರು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯

೧೯. ಗಿರಿಜ ಟಿ–'ಚಿತ್ರದುರ್ಗ ಜಿಲ್ಲಾದರ್ಶನಿ' ಜಗಳೂರು ತಾಲೂಕು ಪ್ರಕಾಶಕರು: ರೇಖಾ ಪ್ರಕಾಶನ, ೧/೮೯೮ ಮೈಸೂರು ಮಠದ ರಸ್ತೆ, ದಾವಣಗೇರೆ ೧೯೯೧

೨೦. ಅನ್ನಪೂರ್ಣಮ್ಮ ಸಿ.ಬಿ.–'ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು' ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ನರಸಿಂಹರಾಜ ಟಿ. 'ಮ್ಯಾಸಬೇಡರ ಸಾಂಸ್ಕೃತಿಕ ವೀರರು: ಒಂದು ಅಧ್ಯಯನ ಕನ್ನಡ ಭಾರತಿ ಎಂ.ಫಿಲ್. ಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ

೨೨. ವೀರೇಂದ್ರಕುಮಾರ ಬಿ.ಪಿ.– ನಾಯಕನಹಟ್ಟಿ ಶ್ರೀ ತಿಪ್ಪೇಸ್ವಾಮಿ ಜಾತ್ರೆ ಬುಡಕಟ್ಟು ಸಂಸ್ಕೃತಿಯ ನೆಲೆಯಲ್ಲಿ , ಪ್ರಕಾಶಕರು ತರಳಬಾಳು ಹುಣ್ಣಿಮೆ ಸ್ಮರಣ ಸಂಚಿಕೆ ಚಿತ್ರದುರ್ಗ ಸಂ: ಲೋಕೇಶ್ ಅಗಸನಕಟ್ಟೆ ಲೇಖಕ: ಬಂಜಗೇರೆ ಜಯಪ್ರಕಾಶ್

೨೩. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ ಹೊಸಪೇಟೆ, ೨೦೦೦೬

೨೪. ಮೈತ್ರಿ ಕೆ.ಎಂ. ಬುಡಕಟ್ಟು ಕುಲಕಸುಬುಗಳು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೫. ಚೆಲುವರಾಜು ಬುಡಕಟ್ಟು ಮಹಾಕಾವ್ಯ ಮಾಲೆ ಜುಂಜಪ್ಪ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೨೬. ಸಂ: ಕೃಷ್ಣಮೂರ್ತಿ ಹನೂರು ಜನಪದ ವೀರಗೀತೆಗಳು, ಪ್ರಕಾಶಕರು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೮೭

೨೭. ಮಂಜುನಾಥ ಬೇವಿನಕಟ್ಟೆ–ಆದಿವಾಸಿ ಪ್ರಕಾಶಕರು: ಸಾಹಿತ್ಯ ನಂದನ ನಂ.೪ನೇ 'ಇ' ಬ್ಲಾಕ್ ರಾಜಾಜಿನಗರ ಬೆಂಗಳೂರು, ೨೦೦೭

೨೮. ರಹಮತ್ ತರೀಕೆರೆ ಸಾಂಸ್ಕೃತಿಕ ಅಧ್ಯಯನ ಪ್ರಕಾಶಕರು: ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ ಜೆ.ಸಿ.ರಸ್ತೆ ಬೆಂಗಳೂರು–೨೦೦೮

೨೯. ರಂಗಪ್ಪ ಎಂ. ನುಂಕೆಮಲೆ ಪರಮಾರ್ಥ ಮೊಳಕಾಲ್ಮೂರು ೧೯೭೧

೩೦. ರಾಜಣ್ಣ ಆರ್. ನಾಯಕ ಜನಾಂಗದ ಇತಿಹಾಸ ಚಳ್ಳಕೆರೆ ೧೯೮೨

೩೧. ಆಂಜನೇಯ ಮ್ಯಾಸಬೇಡರ ಕನ್ನಡ ಸಮಾಜೋಭಾಷಿಕ ಅಧ್ಯಯನ ಅಪ್ರಕಟಿತ ಪಿಎಚ್.ಡಿ. ಪ್ರಬಂಧ ೨೦೦೬

೩೨. ಆದಿವಾಸಿ ಆಖ್ಯಾನ, ಸಿದ್ದಾರ್ಥ ಪ್ರಕಾಶನ, ಹೊಸಪೇಟೆ, ೨೦೦೬



ಶ್ರೀ ಕಂಪಳ ರಂಗಸ್ವಾಮಿ



ಒಳನೋಟದಲ್ಲಿ ಜಗಳೂರಜ್ಜನ ದೇವಸ್ಥಾನ
(ಕಂಪಳ ದೇವರ ಹಟ್ಟಿ)



ಜಗಳೂರಜ್ಜನ ದೇವಸ್ಥಾನ
ಕಂಪಳದೇವರ ಹಟ್ಟಿ



ಯುಗಾದಿ ಸಂದರ್ಭದಲ್ಲಿ ಶೃಂಗಾರಗೊಂಡ
ಜಗಳೂರಜ್ಜ



ಕಾಳವ್ವನ ಹಬ್ಬದಲ್ಲಿ ಜಗಳೂರಜ್ಜ
ಅಲಂಕಾರಗೊಂಡಿರುವುದು
(ಜಗಳೂರು)



ಜಗಳೂರಜ್ಜನದೇವಸ್ಥಾನ ದೀಪಾವಳಿಯಲ್ಲಿ
ಅಲಂಕಾರಗೊಂಡಿರುವುದು



ಜಗಳೂರಜ್ಜ ಹಾಗೂ ಭಕ್ತರು ಕಾಸು ಒಪ್ಪಿಸಿ ಬರುತ್ತಿರುವುದು



ದಸರಾ ಸಂದರ್ಭದಲ್ಲಿ ಅಲಂಕಾರಗೊಂಡ ಜಗಳೂರಜ್ಜ



ಕಂಪಳ ದೇವರ ಹಬ್ಬಯಲ್ಲಿಯ ಜಗಳೂರಜ್ಜನ ದೇವಸ್ಥಾನ



ಸಾಮಾನ್ಯ ದಿನಗಳಲ್ಲಿ ಜಗಳೂರಜ್ಜನ ಅಲಂಕಾರ



ಕಂಪಳರಂಗಸ್ವಾಮಿ ದೇವಸ್ಥಾನದಲ್ಲಿ ಅಲಗು ಆಡುವುದು



ಕಾಸು ಮೀಸಲು ಒಪ್ಪಿಸಿ ಬರುತ್ತಿದ ಮ್ಯಾಸನಾಯಕರು



ಜಗಳೂರಜ್ಜನ ಹಟ್ಟದಲ್ಲಿ ಗುಗ್ಗರಿ ಬೇಯಿಸುವುದು



ಜಗಳೂರಜ್ಜನ ಹಾಗೂ ಕಂಪಳ ರಂಗಸ್ವಾಮಿ ದೇವರ ಎತ್ತುಗಳು



ಹುಡೇಂನಿಂದ ಕುದುರೆ ಬಂದಿರುವುದು



ದೂಳಿ ಸಂದರ್ಭದಲ್ಲಿ ದಾಸೋಹಕ್ಕಾಗಿ ಸಿದ್ಧಪಡಿಸಿದ ಆಹಾರ



ಚಳ್ಳ ಕೆರೆಯಲ್ಲಿರುವ ಜಗಳೂರಜ್ಜನ ಕಲ್ಯಾಣ ಮಂಟಪ



ದೀಪಾವಳಿ ಸಂದರ್ಭದಲ್ಲಿ ಅಲಂಕಾರಗೊಂಡ ಜಗಳೂರಜ್ಜನ ದೇವಸ್ಥಾನ(ಚಳ್ಳಕೆರೆ)


ಮೀಸಲು ಮತ್ತು ದವಸ ಧಾನ್ಯ ಒಪ್ಪಿಸುತ್ತಿರುವ ಭಕ್ತರು


ಜನ್ನಾನಾರು ಗದ್ದಿಗೆ ಹಾಕಿ ಬಾಬು ತೆಗೆದುಕೊಳ್ಳುವುದ


ಭಕ್ತರು ಕಾಸು(ಹಣ) ನೀಡುವ ಸಂದರ್ಭ


ಜಗಳೂರಜ್ಜನಿಗೆ ಕಾಸು ಮೀಸಲು ಒಪ್ಪಿಸಲು ಹೋಗುತ್ತಿರುವುದ


ಪೂಜಾರಿಗಳು ತಮ್ಮ ಬೆಳ್ಳಿ ಪ್ರತಿಮೆಗಳನ್ನು
ಕಂಪಳ ರಂಗ ಸ್ವಾಮಿ ದೇವಸ್ಥಾನದಲ್ಲಿಟ್ಟಿರುವುದು


ಕಂಪಳ ರಂಗಸ್ವಾಮಿ ಪೂಜೆ ಸಂದರ್ಭ



ಜಗಳೂರಜ್ಜನ ದೇವಸ್ಥಾನದಲ್ಲಿ ಜವಳ ತೆಗೆಸುವದು
(ಜಗಳೂರು)



ಸೂರ್ಯನಿಗೆ ನಮಸ್ಕರಿಸುವುದು ದಸರಾ ಸಂದರ್ಭದಲ್ಲಿ (ಜಗಳೂರು)



ವಾಸಿ ಕೊಯುವುದು ಜಗಳೂರು ಪಾಪನಾಯಕ ದೇವಸ್ಥಾನ
(ಜಗಳೂರು)

